KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೨, ೨೦೧೧ (ಭಾದ್ರಪದ ೩೧, ಶಕ ವರ್ಷ ೧೯೩೩) | ಸಂಚಿಕೆ ೩೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವಿನೋದ್ ಚಂದನ್, ಸಿ.ಪಿ.ಸಿ.–679, ಮಂಡ್ಯ ಪೂರ್ವ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಅಪರ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (2)/ಪಿಆರ್/81/2008–09 (ಓ.ಬಿ. ಸಂಖ್ಯೆ: 412/08–09) ದಿನಾಂಕ: 21–03–2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/04/2009–10 (ಓ.ಬಿ. ಸಂಖ್ಯೆ: 08/2009–10) ದಿನಾಂಕ: 06–06–2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 27–05–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/15/2010–11 ದಿನಾಂಕ: 15–08–2010.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 52 ಸಿಎನ್‌ಎಸ್ 11 ದಿನಾಂಕ: 17–06–2011.

**ಪ್ರಸ್ತಾವನೆ :**

ಶ್ರೀ ವಿನೋದ್ ಚಂದನ್, ಸಿ.ಪಿ.ಸಿ.–679, ಮಂಡ್ಯ ಪೂರ್ವ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ಶ್ರೀ ವಿನೋದ್ ಚಂದನ್, ಸಿ.ಪಿ.ಸಿ.–679, ಆದ ನೀವು ಮಂಡ್ಯ ಪೂರ್ವ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನೀವು ದಿನಾಂಕ: 26–12–2008 ರಿಂದ ದಿನಾಂಕ 14–01–2009ರ ವರೆಗೆ ಒಟ್ಟು 20 ದಿವಸಗಳ ಕಾಲ ಮೇಲಧಿಕಾರಿಗಳ ಅನುಮತಿ ಪಡೆಯದೆ ಅಥವಾ ರಜಾ ಅರ್ಜಿಯನ್ನು ಸಲ್ಲಿಸದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ. ದಿನಾಂಕ: 15–01–2009 ರಂದು ಕರ್ತವ್ಯಕ್ಕೆ ಹಾಜರಾಗಿ ಅನಾರೋಗ್ಯದ ನಿಮಿತ್ತ ದಿನಾಂಕ: 26–12–2008 ರಂದು ತನಗೆ ಪೈಲ್ಸ್ ಹಾಗೂ ಹೊಟ್ಟೆ ನೋವಿನ ತೊಂದರೆ ಕಾಣಿಸಿಕೊಂಡಿದ್ದು ತುರ್ತಾಗಿ ಮಂಡ್ಯ ಜಿಲ್ಲಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದುಕೊಂಡಿದ್ದು ಎಂ.ಹೆಚ್.ಎಸ್. ಪಡೆದುಕೊಳ್ಳಲು ಸಾಧ್ಯವಾಗಿರುವುದಿಲ್ಲ ಎಂದು ಮನವಿ ಸಲ್ಲಿಸಿರುತ್ತೀರಿ. ನೀವು ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿದ್ದು ಮೇಲಧಿಕಾರಿಗಳ ಅನುಮತಿ ಪಡೆಯದೆ ಅಥವಾ ರಜೆ ಅರ್ಜಿಯನ್ನು ಸಲ್ಲಿಸದೆ ದಿನಾಂಕ 26–12–2008 ರಿಂದ 14–01–2009ರ ವರೆಗೆ ಒಟ್ಟು 20 ದಿವಸಗಳು ಕರ್ತವ್ಯಕ್ಕೆ ಗೈರುಹಾಜರಾಗುವುದರ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರೆಂಬ ಆರೋಪ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಅಪರ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 21–03–2009ರ ಆದೇಶದಲ್ಲಿ ಅರ್ಜಿದಾರರು

ದಿನಾಂಕ 26-12-2008 ರಿಂದ ದಿನಾಂಕ 14-01-2009ರ ವರೆಗೆ ಒಟ್ಟು 20 ದಿನಗಳು ಗೈರು ಹಾಜರಾದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ಪ್ರಕಾರ **"ವೇತನ ರಹಿತ ರಜೆ"** ಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06-06-2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಿ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಲು ಸರ್ಕಾರವು ತೀರ್ಮಾನಿಸಿ ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 80 ಪೊಸಿಅ 2010, ಬೆಂಗಳೂರು, ದಿನಾಂಕ : 28-06-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿನೋದ್ ಚಂದನ್, ಸಿ.ಪಿ.ಸಿ.-679, ಮಂಡ್ಯ ಪೂರ್ವ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ **"ವಾಗ್ದಂಡನೆ"** ಯನ್ನು ವಿಧಿಸಿ ದಿನಾಂಕ 26-12-2008 ರಿಂದ 14-01-2009ರ ವರೆಗಿನ ವೇತನರಹಿತ ರಜೆಯನ್ನು ಇವರ ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1651 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಗೃಹರಕ್ಷಕ ಸ್ವಯಂಸೇವಕರಿಗೆ ನೀಡಲಾಗುತ್ತಿರುವ ಕರ್ತವ್ಯ ಭತ್ಯೆ ಮತ್ತು ತರಬೇತಿ ಭತ್ಯೆಯ ದರಗಳನ್ನು ಹೆಚ್ಚಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಒಇ 26 ಕಗೃಸೇ 2008, ದಿನಾಂಕ: 21-10-2008.

2. ಮಹಾ ಸಮಾದೇಷ್ಟರ ಪತ್ರ ಸಂಖ್ಯೆ: ಆಡಳಿತ (1) 1/ಸಿಜಿಓ/2011-12, ದಿನಾಂಕ: 07-04-2011.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಗೃಹರಕ್ಷಕರಿಗೆ ನೀಡಲಾಗುತ್ತಿರುವ ದಿನ ಭತ್ಯೆ ದರ ರೂ. 175 ಗಳನ್ನು, ಬೆಂಗಳೂರು ನಗರದಲ್ಲಿ ಹಾಗೂ ರೂ. 150.00 ಗಳನ್ನು ಇತರ ಸ್ಥಳಗಳಲ್ಲಿ ದಿನಾಂಕ: 01-11-2008 ರಿಂದ ಜಾರಿಗೆ ಬರುವಂತೆ ಹೆಚ್ಚಿಸಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರಲ್ಲಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ರಾಜ್ಯದ ವಿವಿಧ ಸ್ಥಳಗಳಲ್ಲಿ ಸೇವೆ ಸಲ್ಲಿಸುತ್ತಿರುವ ಗೃಹರಕ್ಷಕರನ್ನು ಸಾರ್ವಜನಿಕ ಕಟ್ಟಡಗಳ ಪಹರೆ ಕರ್ತವ್ಯ, ಕಾನೂನು ಮತ್ತು ಸುವ್ಯವಸ್ಥೆ, ಸಂಚಾರ ನಿಯಂತ್ರಣ, ಜಾತ್ರೆ, ಹಬ್ಬ, ಉತ್ಸವ ಹಾಗೂ ರಾಷ್ಟ್ರೀಯ ಹಬ್ಬಗಳ ಆಚರಣೆ ಚುನಾವಣಾ ಕರ್ತವ್ಯ, ಗಣ್ಯರ ಭೇಟಿಯ ಕರ್ತವ್ಯ, ಮುಷ್ಕರ, ಸಾರ್ವಜನಿಕ ಪರೀಕ್ಷೆಗಳು, ಉಚಿತ ನೇತ್ರ ಶಿಬಿರ, ರಕ್ತದಾನ ಶಿಬಿರ ಮೊದಲಾದ ಸಂದರ್ಭಗಳಲ್ಲಿ ಬಂದೋಬಸ್ತ್ ಕರ್ತವ್ಯಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಗೃಹರಕ್ಷಕರ ಸೇವೆಯನ್ನು ಬೆಂಗಳೂರು ನಗರ ಸಂಚಾರ ನಿಯಂತ್ರಣ ಆಂತರಿಕ ಭದ್ರತೆ, ರಾಜ್ಯ ಗುಪ್ತವಾರ್ತೆ ಕಾರಾಗೃಹ, ಆಕಾಶವಾಣಿ ಭಾರತೀಯ ಆಹಾರ ನಿಗಮ, ಸಾರಿಗೆ ಅಬಕಾರಿ, ಪ್ರವಾಸೋದ್ಯಮ, ಬೆಂಗಳೂರು ಮತ್ತು ಮೈಸೂರು ವಿಶ್ವವಿದ್ಯಾಲಯಗಳಲ್ಲಿ, ಸರ್ಕಾರಿ ಆಸ್ಪತ್ರೆ, ಶಾಲೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಗಣಿ ಮತ್ತು ಭೂ ವಿಜ್ಞಾನ, ಮುರಾರ್ಜಿದೇಸಾಯಿ ವಸತಿ ಕೇಂದ್ರಗಳಲ್ಲೂ ಉಪಯೋಗಿಸಿಕೊಳ್ಳಲಾಗುತ್ತಿದೆ.

ಇತ್ತೀಚಿನ ದಿನಗಳಲ್ಲಿ ಹಣದುಬ್ಬರದಿಂದಾಗಿ ಎಲ್ಲಾ ಅಗತ್ಯ ವಸ್ತುಗಳ ಬೆಲೆಯಲ್ಲಿ ಏರಿಕೆವುಂಟಾಗಿದೆ ಜೀವನ ನಿರ್ವಹಣಾ ವೆಚ್ಚ ಬಹಳ ದುಬಾರಿಯಾಗಿದೆ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಕರ್ತವ್ಯದ ಮೇಲೆ ತೆರಳಿದಾಗ ಸಾರಿಗೆ ಹಾಗೂ ಪ್ರಾಸಂಗಿಕ ವೆಚ್ಚಗಳನ್ನು ಸಹ ಹೆಚ್ಚಾಗಿ ಭರಿಸುವುದು ಅನಿವಾರ್ಯವಾಗಿದೆ. ಈ ಕಾರಣಕ್ಕಾಗಿ ಪ್ರಸಕ್ತ ನೀಡಲಾಗುತ್ತಿರುವ ಕರ್ತವ್ಯ ಮತ್ತು ತರಬೇತಿ ಭತ್ಯೆಯು ಬಹಳ ಕಡಿಮೆ ಎಂದು ಗೃಹರಕ್ಷಕರು ಇತ್ತೀಚಿನ ದಿನಗಳಲ್ಲಿ ಗಾರೆ, ಬಡಿಗಿ, ಟೈಲರಿಂಗ್, ಪ್ಲಂಬಿಂಗ್ ಕೂಲಿಕೆಲಸ ಮಾಡುವವರು ಹಾಗು ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ದಿನವೊಂದಕ್ಕೆ ಕನಿಷ್ಠ ರೂ.300/- ರಿಂದ ರೂ. 400/- ಗಳಿಸುತ್ತಿದ್ದಾರೆ. ಅಲ್ಲದೆ ನಗರ ಪ್ರದೇಶಗಳಲ್ಲಿ, ಪಟ್ಟಣ ಪ್ರದೇಶಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿಯೂ ಸಹ ದಿನಗೂಲಿ ಕನಿಷ್ಠ ರೂ. 250/- ಲಭಿಸುತ್ತಿದೆ. ಈ ಕಾರಣದಿಂದ ಗೃಹರಕ್ಷಕ ದಳದ ಕರ್ತವ್ಯಗಳಿಗೆ ನೋಂದಾಯಿತ ಸದಸ್ಯರೂ ಬರುತ್ತಿರುವುದು ದಿನೇ ದಿನೇ ಕಡಿಮೆಯಾಗುತ್ತಿದೆ. ಜೀವನ ನಿರ್ವಹಣಾ ವೆಚ್ಚ ದಿನದಿಂದ ದಿನಕ್ಕೆ ದುಬಾರಿಯಾಗುತ್ತಿರುವುದರಿಂದ ಹಾಗೂ ದಿನನಿತ್ಯದ ಬದುಕನ್ನು ನಿರ್ವಹಿಸುವುದು ಕಷ್ಟಕರವಾಗಿರುವುದರಿಂದ, ಕರ್ತವ್ಯ ಮತ್ತು ತರಬೇತಿ ಭತ್ಯೆಯ ದರಗಳನ್ನು ತಕ್ಷಣದಲ್ಲಿಯೇ ಹೆಚ್ಚಿಸಿ, ಗೃಹರಕ್ಷಕರ ನೈತಿಕ ಸ್ಥೈರ್ಯವನ್ನು ವೃದ್ಧಿಗೊಳಿಸಬೇಕಾಗಿದೆ.

ಆದ್ದರಿಂದ ಗೃಹರಕ್ಷಕರ ಕರ್ತವ್ಯ ಹಾಗೂ ತರಬೇತಿ ಭತ್ಯೆಯನ್ನು ದಿನವೊಂದಕ್ಕೆ ಬೆಂಗಳೂರು ನಗರದಲ್ಲಿ ರೂ. 175/- ರಿಂದ ರೂ. 250/- ಕ್ಕೆ ಹಾಗೂ ಇತರೆ ಸ್ಥಳಗಳಲ್ಲಿ ರೂ. 150/- ರಿಂದ ರೂ. 200/- ಗಳಿಗೆ ಹೆಚ್ಚಿಸಲು ಕೋರಿ, ಕರ್ತವ್ಯ ಮತ್ತು ತರಬೇತಿ ಭತ್ಯೆಯ ದರಗಳನ್ನು ಹೆಚ್ಚಿಸುವುದರಿಂದ ವಾರ್ಷಿಕವಾಗಿ ಇಲಾಖೆಗೆ ಕೇವಲ ರೂ. 225.00 ಲಕ್ಷಗಳ ಹೆಚ್ಚುವರಿ ವೆಚ್ಚ ಉಂಟಾಗುತ್ತದೆ ಎಂದೂ ತಿಳಿಸಿ ಈ ಕೆಳಕಂಡಂತೆ ವಿವರ ನೀಡಿದ್ದಾರೆ,

1) ಸರಾಸರಿ ಆಧಾರದ ಮೇರೆಗೆ ವಾರ್ಷಿಕದಲ್ಲಿ -- ಬೆಂಗಳೂರು ನಗರದಲ್ಲಿ -- ಒಂದು ಲಕ್ಷ ಮಾನವ ದಿನಗಳು
ವಿವಿಧ ಕರ್ತವ್ಯಗಳಿಗೆ (ಚುನಾವಣೆ ಹಾಗೂ -- ಇತರೆ ಸ್ಥಳಗಳಲ್ಲಿ -- ಮೂರು ಲಕ್ಷ ಮಾನವ ದಿನಗಳು
ಅನಿರೀಕ್ಷಿತ ಕರ್ತವ್ಯಗಳನ್ನು ಹೊರತುಪಡಿಸಿ)

ಗೃಹರಕ್ಷಕರ ನಿಯೋಜನೆಯ ಅಂದಾಜು ಒಟ್ಟು

ಮಾನವ ದಿನಗಳು

2) ಶಿಫಾರಸ್ಸು ಮಾಡಲಾದ ದರದಂತೆ ತಗಲುವ -- ಬೆಂಗಳೂರು ನಗರ 1 ಲಕ್ಷ X 250 = 250.00 ಲಕ್ಷಗಳು
ಒಟ್ಟು ವಾರ್ಷಿಕ ವೆಚ್ಚ -- ಇತರೆ ಸ್ಥಳಗಳಲ್ಲಿ 3 ಲಕ್ಷ X 200 = 600.00 ಲಕ್ಷಗಳು

ಒಟ್ಟು 850.00 ಲಕ್ಷಗಳು

3) ಹಾಲಿ ಇರುವ ದರದಂತೆ ತಗಲುವ -- ಬೆಂಗಳೂರು ನಗರ 1 ಲಕ್ಷ X 175 = 175.00 ಲಕ್ಷಗಳು
ಒಟ್ಟು ವಾರ್ಷಿಕ ವೆಚ್ಚ -- ಇತರೆ ಸ್ಥಳಗಳಲ್ಲಿ 3 ಲಕ್ಷ X 150 = 450.00 ಲಕ್ಷಗಳು

ಒಟ್ಟು 625.00 ಲಕ್ಷಗಳು

ಒಟ್ಟು ಹೆಚ್ಚುವರಿ ವೆಚ್ಚ 225.00 ಲಕ್ಷಗಳು

ಕರ್ತವ್ಯ ಮತ್ತು ತರಬೇತಿ ಭತ್ಯೆಯ ದರಗಳ ಪರಿಷ್ಕರಣೆಯಿಂದಾಗಿ ತಗಲುವ ಹೆಚ್ಚುವರಿ ವೆಚ್ಚ ರೂ. 225.00 ಲಕ್ಷಗಳನ್ನು ಪ್ರಸಕ್ತ 2011–12ನೇ ಆರ್ಥಿಕ ಸಾಲಿಗೆ 2070 – 107–01–015 ಪೂರಕ ವೆಚ್ಚಗಳ ಅಡಿಯಲ್ಲಿ ಭರಿಸಲಾಗುವುದು ಎಂದು ತಿಳಿಸಿದ್ದಾರೆ.

ಮಹಾಸಮಾದೇಷ್ಟರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 50 ಕಗೃಸೇ 2011, ಬೆಂಗಳೂರು, ದಿನಾಂಕ : 29–06–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗೃಹ ರಕ್ಷಕರಿಗೆ ಪ್ರಸಕ್ತ ಬೆಂಗಳೂರಿನಲ್ಲಿ ನೀಡಲಾಗುತ್ತಿರುವ ದಿನಭತ್ಯೆ ದರ ರೂ. 175/– ಗಳಿಂದ ರೂ. 200 ಗಳಿಗೆ ಹಾಗೂ ಇತರೆ ಸ್ಥಳಗಳಲ್ಲಿ ನೀಡಲಾಗುತ್ತಿರುವ ದಿನಭತ್ಯೆ ದರ ರೂ. 150.00/– ಗಳಿಂದ ರೂ. 175/– ಗಳಿಗೆ ಹೆಚ್ಚಿಸಲು ಮತ್ತು ಈ ಸೌಲಭ್ಯವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಹೆಚ್ಚಿಸುವುದಕ್ಕೆ ಸರ್ಕಾರವು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2070–107–01–015 ಪೂರಕ ವೆಚ್ಚಗಳ ಅಡಿಯಲ್ಲಿ ಭರಿಸತಕ್ಕದ್ದು ಹಾಗೂ ಈ ವೆಚ್ಚವನ್ನು ಶೇಕಡಾ 25 ರಷ್ಟನ್ನು ಕೇಂದ್ರ ಸರ್ಕಾರದಿಂದ ಮರು ಪಾವತಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 148 ವೆಚ್ಚ–11/2011 ದಿನಾಂಕ: 27–05–2011 ರಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಆರ್ ಶ್ರೀನಿವಾಸರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

ಪಿ.ಆರ್. 1652

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಅಧಿಕಾರಿ / ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 ದಿನಾಂಕ: 24–08–2009.
2. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾ–2) ದಿನಾಂಕ: 13–01–2011.
3. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001 ದಿನಾಂಕ: 22–11–2001.
4. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾಗ–2) ದಿನಾಂಕ: 21–05–2011.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2011 ದಿನಾಂಕ: 31–05–2011.

**ಪ್ರಸ್ತಾವನೆ :**

ಮೇಲೆ (4) ರಲ್ಲಿ ಓದಲಾದ ದಿನಾಂಕ 21–05–2011ರ ಸರ್ಕಾರಿ ಆದೇಶದಲ್ಲಿ ಪೊಲೀಸ್ ಅಧಿಕಾರಿ ಮತ್ತು ಪೊಲೀಸ್ ಸಿಬ್ಬಂದಿಗಳ ವರ್ಗಾವಣೆ ಕುರಿತಂತೆ ವಿಸ್ತೃತವಾದ ಮಾರ್ಗ ಸೂಚಿಗಳನ್ನು ನೀಡಲಾಗಿದ್ದು, 2011–12ನೇ ಸಾಲಿನ ಪೊಲೀಸ್ ಸಿಬ್ಬಂದಿಗಳ (ಲಿಪಿಕ ನೌಕರರನ್ನು ಹೊರತುಪಡಿಸಿ) ಸಾಮಾನ್ಯ ವರ್ಗಾವಣೆಯನ್ನು ಜೂನ್ 15, 2011 ರೊಳಗಾಗಿ ಜಾರಿಗೊಳಿಸತಕ್ಕದ್ದು ಎಂದು ಆದೇಶಿಸಲಾಗಿತ್ತು. ಉಲ್ಲೇಖ (5)ರ ಆದೇಶದಲ್ಲಿ ಸಿಆಸು ಇಲಾಖೆಯು ಸರ್ಕಾರಿ ನೌಕರರ ವರ್ಗಾವಣೆಗಳನ್ನು ದಿನಾಂಕ 30–06–2011ರ ವರೆಗೆ ಮಾಡಬಹುದು ಎಂದು ಆದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪೊಲೀಸ್ ಇಲಾಖೆಯಲ್ಲಿನ ಪೊಲೀಸ್ ಅಧಿಕಾರಿ/ನೌಕರರ ವರ್ಗಾವಣೆ ಅವಧಿಯನ್ನು ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009 (ಭಾ–2) ಬೆಂಗಳೂರು, ದಿನಾಂಕ : 30–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮೇಲೆ ಓದಲಾದ (4) ರಲ್ಲಿನ ದಿನಾಂಕ 21–05–2011ರ ಸರ್ಕಾರದ ಆದೇಶದಲ್ಲಿ ನಮೂದಿಸಿದ ಷರತ್ತುಗಳೊಂದಿಗೆ ಪೊಲೀಸ್ ಅಧಿಕಾರಿ/ನೌಕರರ ವರ್ಗಾವಣೆಗಳನ್ನು ದಿನಾಂಕ 30–06–2011 ವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1653

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀಮತಿ, ಪಿ. ಪದ್ಮಮ್ಮ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಅಪರ ಆಯುಕ್ತರ ಕಛೇರಿ, ಧಾರವಾಡ, (ಪ್ರಸ್ತುತ ಅಮಾನತ್ತು) ಇವರ ಅಮಾನತ್ತು ರದ್ದುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಇಡಿ 17 ಡಿಜಿಪಿ 2011 ದಿನಾಂಕ : 01–03–2011.

**ಪ್ರಸ್ತಾವನೆ :**

ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿ ನಡೆದಿದೆ ಎನ್ನಲಾದ ಪ್ರೌಢಶಾಲೆಗಳ ವರ್ಗಾವಣೆ/ಸ್ಥಳಾಂತರ ಅಕ್ರಮಗಳಿಗೆ ಸಂಬಂಧಿಸಿದಂತೆ ಕರ್ತವ್ಯ ಲೋಪವೆಸಗಿರುವ ಅಧಿಕಾರಿಗಳನ್ನು ಮೇಲೆ ಓದಲಾದ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಸದರಿ ಆದೇಶದ ಕ್ರಮ ಸಂಖ್ಯೆ : 1 ರಲ್ಲಿ ಶ್ರೀಮತಿ ಪಿ. ಪದ್ಮಮ್ಮ, (ಹಿಂದಿನ ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಸನ) ಹಾಲಿ ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಅಪರ ಆಯುಕ್ತರ ಕಛೇರಿ, ಧಾರವಾಡ, ಇವರನ್ನು ಸಹ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಈ ರೀತಿ ಅಮಾನತ್ತುಗೊಳಿಸಿದ್ದ ಅಧಿಕಾರಿಗಳ ಮೇಲೆ ನಿಯಮಾನುಸಾರ ಶಿಸ್ತು ಕ್ರಮ ಜರುಗಿಸುವ ಪ್ರಕ್ರಿಯೆಯು ಸರ್ಕಾರದ ಪರಿಶೀಲನೆಯಲ್ಲಿದೆ. ಶ್ರೀಮತಿ ಪಿ. ಪದ್ಮಮ್ಮ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಅಪರ ಆಯುಕ್ತರ ಕಛೇರಿ, ಧಾರವಾಡ, ಇವರು ತಮ್ಮ ಅಮಾನತ್ತು ರದ್ದುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸುವಂತೆ ಮನವಿ ಸಲ್ಲಿಸಿರುತ್ತಾರೆ. ಸದರಿಯವರ ಮನವಿಯನ್ನು ಸರ್ಕಾರವು ಪರಿಶೀಲಿಸಿ ಇವರ ಅಮಾನತ್ತನ್ನು ತೆರವುಗೊಳಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 22 ಡಿಜಿಪಿ 2011, ಬೆಂಗಳೂರು, ದಿನಾಂಕ : 30–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಪಿ.ಪದ್ಮಮ್ಮ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಅಪರ ಆಯುಕ್ತರ ಕಛೇರಿ, ಧಾರವಾಡ, (ಪ್ರಸ್ತುತ ಅಮಾನತ್ತಿನಲ್ಲಿರುವವರು) ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿರಿಸಿ, ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ, ಇಲ್ಲಿ ಖಾಲಿ ಇರುವ ರೀಡರ್ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಆಡಳಿತ)

ಪಿ.ಆರ್. 1654

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** 13ನೇ ಹಣಕಾಸು ಆಯೋಗದ ಅನುದಾನದಿಂದ ಕೆರೆಗಳ ಹಾಗೂ ಪಾರಂಪರಿಕ ಜಲಕಾಯಗಳ ಪುನರುಜ್ಜೀವನ ಯೋಜನೆ ಅನುಷ್ಠಾನಗೊಳಿಸುವ ಕುರಿತು.

**ಪ್ರಸ್ತಾವನೆ :**

ಭಾರತ ಸರ್ಕಾರದ 13ನೇ ಹಣಕಾಸು ಆಯೋಗವು ಕೆರೆಗಳ ಹಾಗೂ ಪಾರಂಪರಿಕ ಜಲಕಾಯಗಳ ಪುನರುಜ್ಜೀವನಕ್ಕಾಗಿ ಕರ್ನಾಟಕ ರಾಜ್ಯಕ್ಕೆ ರೂ. 350.00 ಕೋಟಿ ಅನುದಾನ ಒದಗಿಸಲು ಶಿಫಾರಸ್ಸು ಮಾಡಿದೆ. ಸದರಿ ಅನುದಾನವು 2011–15ರ ಸಾಲಿಗೆ ಲಭ್ಯವಿರುವುದಾಗಿ ತಿಳಿಸಲಾಗಿದೆ. ಈ ಅನುದಾನವನ್ನು ಬಳಸಿಕೊಂಡು 2011–12 ರಿಂದ 2014–15 ರವರೆಗಿನ 4 ವರ್ಷಗಳಲ್ಲಿ ಈ ಯೋಜನೆಯಡಿ ಗುರುತಿಸಲಾಗುವ ಕಾಮಗಾರಿಗಳ ಅನುಷ್ಠಾನವನ್ನು ಮಾಡಬೇಕಾಗಿದೆ.

ರಾಜ್ಯದ ಬರಪೀಡಿತ ಪ್ರದೇಶಾಭಿವೃದ್ಧಿ ಕಾರ್ಯಕ್ರಮದಲ್ಲಿ ಸೇರಿರುವ ತಾಲ್ಲೂಕುಗಳಲ್ಲಿನ ಕೆರೆಗಳ ಅಭಿವೃದ್ಧಿ ಕಾರ್ಯಕ್ರಮಕ್ಕೆ ಭಾರತ ಸರ್ಕಾರದ ಜಲಕಾಯಗಳ ದುರಸ್ಥಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಮಾಡಲು ರಾಜ್ಯ ಯೋಜನೆ ಅಡಿ ಆಯ್ದ ಕೆರೆಗಳ ಅಭಿವೃದ್ಧಿ ಕಾಮಗಾರಿಗೆ ಭಾರತ ಸರ್ಕಾರದ ಅನುಮೋದನೆ ಪಡೆದು ಅನುಷ್ಠಾನಗೊಳಿಸುತ್ತಿರುವುದರಿಂದ ಪ್ರಸ್ತುತ ಭಾರತ ಸರ್ಕಾರದ 13ನೇ ಹಣಕಾಸು ಆಯೋಗವು ನೀಡುವ ಅನುದಾನದಡಿ ಬಹುತೇಕ ಇತರ ತಾಲ್ಲೂಕಿನ ಕೆರೆಗಳೂ ಸೇರಿದಂತೆ ಸಣ್ಣ ನೀರಾವರಿ ಯೋಜನೆಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಲಾಗಿದೆ.

ಈ ಕಾರ್ಯಕ್ರಮವನ್ನು ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಿಂದ ಅನುಷ್ಠಾನಗೊಳಿಸಲು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 108 ಮಸಾವಿ 2010, ಬೆಂಗಳೂರು, ದಿನಾಂಕ : 04–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 13ನೇ ಹಣಕಾಸು ಆಯೋಗದ ಅನುದಾನದಿಂದ ಕೆರೆಗಳ ಹಾಗೂ ಪಾರಂಪರಿಕ ಜಲಕಾಯಗಳ ಪುನರುಜ್ಜೀವನ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಿಂದ ಅನುಷ್ಠಾನಗೊಳಿಸಲು ಅನುಮೋದನೆ ನೀಡಲಾಗಿದೆ.

This Order falls within the purview of the provisions to sub rule (2) of rule 17 of Karnataka Government (Transaction of Business) Rules 1977 and issued accordingly.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1655

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಬಿ.ಎಸ್. ಧವನ್, ಮುಖ್ಯ ಗ್ರಂಥಾಲಯಾಧಿಕಾರಿ, ಗ್ರೇಡ್–1, ನಗರ ಕೇಂದ್ರ ಗ್ರಂಥಾಲಯ, ಕೋಲಾರ ಇವರಿಗೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :**
1. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಸಾಗ್ರಇ : ಸಿಬ್ಬಂದಿ : ಎ1 : ವಬ : 38/2007–08/5096–5101, ದಿನಾಂಕ : 17–09–2007.
2. ಸರ್ಕಾರದ ಆದೇಶ ಸಂಖ್ಯೆ : ಇಡಿ 119 ಡಿಜಿಓ 2006, ದಿನಾಂಕ : 14–11–2007.
3. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಇವರ ಪತ್ರ ಸಂಖ್ಯೆ : ಸಾಗ್ರಇ/ಸಿಬ್ಬಂದಿ/ಎ1/ವಬ/1685/2007–08, ದಿನಾಂಕ : 09–07–2008.
4. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ : ಇಡಿ 119 ಡಿಜಿಓ 2006, ದಿನಾಂಕ : 14–10–2008.
5. ಆರೋಪಿ ಅಧಿಕಾರಿಗಳ ಸಮಜಾಯಿಷಿ ದಿನಾಂಕ : 07–11–2008.
6. ದಿನಾಂಕ : 17–12–2008ರ ಆದೇಶ ಸಂಖ್ಯೆ : ಇಡಿ 119 ಡಿಜಿಓ 2006.
7. ಸರ್ಕಾರದ ಆದೇಶ ಸಂಖ್ಯೆ : ಇಡಿ 119 ಡಿಜಿಓ 2006, ದಿನಾಂಕ : 07–07–2009.
8. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ : 20–10–2009.
9. 2ನೇ ಕಾರಣ ಕೇಳುವ ನೋಟೀಸ್ ದಿನಾಂಕ : 01–09–2010.
10. 2ನೇ ಕಾರಣ ಕೇಳುವ ನೋಟೀಸ್‌ಗೆ ಅಧಿಕಾರಿಗಳ ಸಮಜಾಯಿಷಿ ದಿನಾಂಕ : 14–09–2010.
11. ಸರ್ಕಾರದ ಸಮಸಂಖ್ಯೆ ಪತ್ರ ದಿನಾಂಕ : 06–10–2010.
12. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರ ಪತ್ರ ದಿನಾಂಕ : 05–03–2011.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 17–09–2007ರ ಪತ್ರದಲ್ಲಿ, ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ರವರು ಶ್ರೀ ಬಿ.ಎಸ್. ಧವನ್, ಮುಖ್ಯ ಗ್ರಂಥಾಲಯಾಧಿಕಾರಿ, ಗ್ರೇಡ್–1, ನಗರ ಕೇಂದ್ರ ಗ್ರಂಥಾಲಯ, ಕೋಲಾರ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಮಯದಲ್ಲಿ ಇವರ ವಿರುದ್ಧ ಕೆಳಕಂಡ ಆರೋಪಗಳ ಕುರಿತು ಶಿಸ್ತು ಕ್ರಮ ಜರುಗಿಸಲು ಶಿಫಾರಸ್ಸು ಮಾಡಿರುತ್ತಾರೆ.

1. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ಗ್ರಂಥಾಲಯ ಸಭೆಯನ್ನು ನಡೆಸಿರುವುದಿಲ್ಲ.
2. 2006–07 ಮತ್ತು 2007–08ರ ಆಯವ್ಯಯವನ್ನು ಮಾಡಿರುವುದಿಲ್ಲ.
3. ಗ್ರಾಮಪಂಚಾಯಿತಿ ಮೇಲ್ವಿಚಾರಕರ ಆಯ್ಕೆ ಪ್ರಕ್ರಿಯೆ ಮಾಡಿರುವುದಿಲ್ಲ.
4. ಹೊಸದಾಗಿ ಪ್ರಾರಂಭವಾಗಬೇಕಾದ ಗ್ರಾಮಪಂಚಾಯಿತಿ ಗ್ರಂಥಾಲಯಗಳಿಗೆ ನಿರ್ದೇಶಕರ ಕಛೇರಿಯಿಂದ ಸರಬರಾಜಾದ ಪುಸ್ತಕ ಮತ್ತು ಪೀಠೋಪಕರಣಗಳನ್ನು ಗ್ರಂಥಾಲಯಗಳಿಗೆ ತಲುಪಿಸಿರುವುದಿಲ್ಲ, ತಲುಪಿಸುವ ವ್ಯವಸ್ಥೆಯನ್ನು ಮಾಡಿರುವುದಿಲ್ಲ.
5. ಜಿಲ್ಲಾ ಕೇಂದ್ರ ಗ್ರಂಥಾಲಯ, ಕೋಲಾರ ಈ ಕಛೇರಿಯ ಕಾರ್ಯಭಾರವನ್ನು ಸಂಬಂಧಿಸಿದವರಿಗೆ ವಹಿಸದೇ ರಜೆ ಮೇಲಿರುವಾಗಲೇ ಜಿಲ್ಲಾ ಕೇಂದ್ರ ಗ್ರಂಥಾಲಯ, ಬೆಳಗಾವಿ ಇಲ್ಲಿಯ ಕಛೇರಿಯ ಕಾರ್ಯಭಾರವನ್ನು ಒತ್ತಾಯವಾಗಿ ವಹಿಸಿಕೊಂಡಿರುತ್ತಾರೆ.
6. ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಗ್ರಂಥಾಲಯ ಪ್ರಾಧಿಕಾರ ಇವರ ಸೂಚನೆಯನ್ನು ಧಿಕ್ಕರಿಸಿದ್ದಾರೆ.

ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 14–11–2007ರ ಸರ್ಕಾರದ ಆದೇಶದಲ್ಲಿ ಶ್ರೀಯುತರನ್ನು ಶಿಸ್ತುಕ್ರಮ ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ : (3)ರಲ್ಲಿ ಓದಲಾದ ದಿನಾಂಕ : 09–07–2008ರ ಪತ್ರದಲ್ಲಿ ನಿರ್ದೇಶಕರು ಸಾರ್ವಜನಿಕ ಗ್ರಂಥಾಲಯ ಇಲಾಖೆ ಇವರು ಶ್ರೀ ಬಿ.ಎಸ್. ಧವನ್, ಮುಖ್ಯ ಗ್ರಂಥಾಲಯಾಧಿಕಾರಿ, ಜಿಲ್ಲಾ ಕೇಂದ್ರ ಗ್ರಂಥಾಲಯ, ಕೋಲಾರ ಇವರ ವಿರುದ್ಧ ಕರಡು ದೋಷಾರೋಪಣ ಪಟ್ಟಿಯನ್ನು ಅನುಬಂಧ 1 ರಿಂದ 4 ರವರೆಗೆ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ : (4)ರಲ್ಲಿ ಓದಲಾದ ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ : 14–10–2008 ರಲ್ಲಿ ಶ್ರೀಯುತರ ಕರ್ತವ್ಯಲೋಪ, ಎಸಗಿರುವ ಆರೋಪಗಳ ಹಿನ್ನೆಲೆಯಲ್ಲಿ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ಅನ್ವಯ ಶಿಸ್ತಿನ ಕ್ರಮ ಜಾರಿಗೊಳಿಸಿ, ವಿಚಾರಣೆ ಪ್ರಾರಂಭಿಸಿ ನಿಗಧಿತ ಅವಧಿಯಲ್ಲಿ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಿ, ಆರೋಪ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ : (5)ರಲ್ಲಿ ಓದಲಾದ ದಿನಾಂಕ : 07–11–2008ರ ಹೇಳಿಕೆಯಲ್ಲಿ ಆಪಾದಿತ ನೌಕರರು ತಮ್ಮ ಮೇಲಿನ ಎಲ್ಲಾ 5 ಆರೋಪಗಳಿಗೆ ಉತ್ತರಿಸುವುದರೊಂದಿಗೆ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ : (6)ರಲ್ಲಿ ಓದಲಾದ ಸರ್ಕಾರದ ದಿನಾಂಕ : 17–12–2008ರ ಆದೇಶದನ್ವಯ ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳುವ ಸಲುವಾಗಿ ನಿಯಮಾನುಸಾರ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಅದರಂತೆ ವಿಚಾರಣಾಧಿಕಾರಿಗಳು ಮತ್ತು ದಂಡನಾಧಿಕಾರಿಗಳನ್ನು ನೇಮಕ ಮಾಡಿ ವಿಚಾರಣಾ ವರದಿ ನೀಡುವಂತೆ ಆದೇಶಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ : (7)ರಲ್ಲಿ ಓದಲಾದ ದಿನಾಂಕ : 07–07–2009ರ ಸರ್ಕಾರದ ಆದೇಶದಲ್ಲಿ ಶ್ರೀಯುತರ ಅಮಾನತ್ತು ಆದೇಶವನ್ನು ಹಿಂಪಡೆದು ಹಾಲಿ ಖಾಲಿ ಇರುವ ಉಪನಿರ್ದೇಶಕರು, ಜಿಲ್ಲಾ ಕೇಂದ್ರ ಗ್ರಂಥಾಲಯ, ಬಿಜಾಪುರ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಿ ಆದೇಶ ಹೊರಡಿಸಿದೆ.

ಮೇಲೆ ಕ್ರಮ ಸಂಖ್ಯೆ : (8)ರಲ್ಲಿ ಓದಲಾದ ದಿನಾಂಕ : 20–10–2009ರ ವರದಿಯಲ್ಲಿ ವಿಚಾರಣಾಧಿಕಾರಿಗಳು ಸದರಿ ಅಧಿಕಾರಿಯ ಮೇಲಿನ 5 ಆರೋಪಗಳ ಪೈಕಿ ಒಂದು ಆರೋಪ ರುಜುವಾತಾಗಿದೆ ಎಂದು ವಿಚಾರಣಾ ವರದಿ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ : (9)ರಲ್ಲಿ ಓದಲಾದ ದಿನಾಂಕ : 01–09–2010ರ ನೋಟೀಸಿನನ್ವಯ ಮೇಲ್ಕಂಡ ವಿಚಾರಣಾ ವರದಿಯನ್ನು ಆಧರಿಸಿ 2ನೇ ಕಾರಣ ಕೇಳುವ ನೋಟೀಸನ್ನು ಆಪಾದಿತ ಅಧಿಕಾರಿಗೆ ಜಾರಿ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ : (10)ರಲ್ಲಿ ಓದಲಾದ ದಿನಾಂಕ : 14–09–2010ರ ರಕ್ಷಣಾ ಹೇಳಿಕೆಯಲ್ಲಿ ಆಪಾದಿತ ಅಧಿಕಾರಿಗಳು ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದು, ಆಪಾದನೆಯಿಂದ ಮುಕ್ತಿಗೊಳಿಸಲು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ : (11)ರಲ್ಲಿ ಓದಲಾದ ಸರ್ಕಾರದ ಪತ್ರ ದಿನಾಂಕ : 06–10–2010ರಲ್ಲಿ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಇವರಿಂದ ಸದರಿ ವಿಷಯದಲ್ಲಿ ಅಭಿಪ್ರಾಯವನ್ನು ನೀಡುವಂತೆ ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ : (12)ರಲ್ಲಿ ಓದಲಾದ ದಿನಾಂಕ : 05–03–2011ರ ಪತ್ರದಲ್ಲಿ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರು ಸದರಿ ಮುಖ್ಯ ಗ್ರಂಥಾಲಯಾಧಿಕಾರಿಗಳು ನೀಡಿರುವ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ಯಾವುದೇ ಸತ್ಯಾಂಶ ಇಲ್ಲದಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ಪ್ರಕಾರ ಕ್ರಮ ತೆಗೆದುಕೊಳ್ಳಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವರು.

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ, ಸರ್ಕಾರವು ದಂಡನೆಯನ್ನು ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 146 ಎಲ್‌ಐಬಿ 2009, ಬೆಂಗಳೂರು ದಿನಾಂಕ : 29ನೇ ಜೂನ್ 2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಎಸ್.ಧವನ್, ಮುಖ್ಯ ಗ್ರಂಥಾಲಯಾಧಿಕಾರಿ (ಗ್ರೇಡ್–1), ಜಿಲ್ಲಾ ಕೇಂದ್ರ ಗ್ರಂಥಾಲಯ, ಕೋಲಾರ ಪ್ರಸ್ತುತ ಉಪನಿರ್ದೇಶಕರು, ಜಿಲ್ಲಾ ಕೇಂದ್ರ ಗ್ರಂಥಾಲಯ, ಕಾರವಾರ ಇವರ ಮೇಲಿನ 5 ಆರೋಪಗಳ ಪೈಕಿ ಒಂದು ಆರೋಪವು ಸಾಬೀತಾಗಿದ್ದು, ಇವರಿಗೆ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮರಹಿತವಾಗಿ (without cumulative effect) ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಆಡಳಿತ)

ಪಿ.ಆರ್. 1656

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಎಲ್.ಬಿ. ಶಿಲ್ಪಕಲಾ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬೈಲಹಳ್ಳಿ, ಹಾಸನ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಓ(2ಎ)/80/2010–11 ದಿನಾಂಕ : 21–05–2011.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ॥ ಎಲ್.ಬಿ. ಶಿಲ್ಪಕಲಾ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬೈಲಹಳ್ಳಿ, ಹಾಸನ ಜಿಲ್ಲೆ ಇವರು ಸರ್ಕಾರಿ ಅಧಿಸೂಚನೆ ಸಂಖ್ಯೆ : ಆಕುಕ 739 ಹೆಚ್‌ಎಸ್‌ಹೆಚ್ 2008 ದಿನಾಂಕ : 09–01–2009ರ ಪ್ರಕಾರ ದಿನಾಂಕ : 06–05–2009 ರಂದು ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ : 26–12–2009 ರಿಂದ ಅನ್ವಯವಾಗುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ದಿನಾಂಕ : 13–04–2010 ರಂದು ಜಿಲ್ಲಾ ಆಕುಕ ಅಧಿಕಾರಿ, ಹಾಸನ ಇವರಿಗೆ ಸಲ್ಲಿಸಿದ ಮನವಿಯಲ್ಲಿ ಕೋರಿರುತ್ತಾರೆ. ಆದರೆ ಈ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲೇ ಅನಧಿಕೃತ ಗೈರುಹಾಜರಾಗಿರುವುದರಿಂದ ಪ್ರೊಬೇಷನರಿ ನಿಯಮಗಳನ್ವಯ ದಿನಾಂಕ : 26–12–2009 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಿಮೋಚನೆಗೊಳಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ವೈದ್ಯರು ದಿನಾಂಕ : 26–12–2009 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುವುದನ್ನು ಪರಿಗಣಿಸಿ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 184 ಹೆಚ್‌ಎಸ್‌ಹೆಚ್ 2011, ಬೆಂಗಳೂರು ದಿನಾಂಕ : 28ನೇ ಜೂನ್ 2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಎಲ್.ಬಿ. ಶಿಲ್ಪಕಲಾ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬೈಲಹಳ್ಳಿ, ಹಾಸನ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ : 26–12–2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

ಪಿ.ಆರ್. 1657

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ರಮೇಶ್ ದೇಸಾಯಿ, ಹಿಂದಿನ ತಹಸೀಲ್ದಾರ್, ಸಿಂಧನೂರು ಇವರ ಮೇಲಿನ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನಿರಾಕರಿಸುವ ಕುರಿತು.

**ಓದಲಾಗಿದೆ:**

1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜೆ)/ಚಿ–22/ಸಿಆರ್:4/2007, ದಿನಾಂಕ: 06.04.2009, ಪತ್ರ ಸ್ವೀಕೃತಿ ದಿನಾಂಕ: 31.10.2009, ದಿನಾಂಕ: 01.02.2010 ಮತ್ತು ದಿನಾಂಕ: 17.05.2010.
2. ತನಿಖಾಧಿಕಾರಿಗಳ ಅಂತಿಮ ವರದಿ ಸಂಖ್ಯೆ: 4ಗುನ್ನೆ/ಲೋಕ/ಠಾಣೆ/ಆರ್‌ಸಿಆರ್/2007, ದಿನಾಂಕ: 10.02.2010.
3. ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 39 ಎಡಿಇ 2009, ದಿ: 05–09–2009
4. ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 39 ಎಡಿಇ 2007, ದಿನಾಂಕ: 05.09.2009 ಮತ್ತು ದಿನಾಂಕ: 16.04.2010.
5. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷೀದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಶ್ರೀ ರಮೇಶ್ ದೇಸಾಯಿ, ಹಿಂದಿನ ತಹಸೀಲ್ದಾರ್, ಸಿಂಧನೂರು ಇವರ ವಿರುದ್ಧ ಗುನ್ನೆ ಸಂಖ್ಯೆ: 4 ಗುನ್ನೆ/ಲೋಕ/ಠಾಣೆ/ ಆರ್‌ಸಿಆರ್/2007, ದಿನಾಂಕ: 10.02.2009 ರಲ್ಲಿ ಆರಕ್ಷಕ ನಿರೀಕ್ಷಕರು, ಲೋಕಾಯುಕ್ತ ಠಾಣೆ, ರಾಯಚೂರು ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಮೇಲೆ ಓದಲಾದ ಕ್ರಮ ಸಂಖ್ಯೆ:1ರ ದಿನಾಂಕ: 06.04.2009ರ ಪತ್ರದೊಂದಿಗೆ ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

**2)** ಸಕ್ಷಮ ಪ್ರಾಧಿಕಾರವಾದ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ:1 ರಲ್ಲಿನ ದಿನಾಂಕ: 06.04.2009 ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳ ಬಗ್ಗೆ ಸರ್ಕಾರವು ತನ್ನ ಬುದ್ದಿಯನ್ನು ತೊಡಗಿಸಿ (mind apply)ಪ್ರಕರಣವನ್ನು ಅಮೂಲಾಗ್ರವಾಗಿ ಪರಿಶೀಲಿಸಿದೆ.

1) ಪ್ರಥಮ ವರ್ತಮಾನ ವರದಿ ಲೋಕಾಯುಕ್ತ ಠಾಣೆ, ರಾಯಚೂರು ರವರ ಪ್ರಕರಣ ಸಂಖ್ಯೆ: 4:2007.
2) ಪ್ರಾಯೋಗಿಕ ಪಂಚನಾಮೆ ದಿನಾಂಕ: 15.10.2007.
3) ಟ್ರ್ಯಾಪ್ ಮಹಜರ್ ದಿನಾಂಕ: 15.10.2007.
4) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: PHI/CME/LOK/91/07-08 dated: 12.12.2007.
5) ಕೃತ್ಯ ನಡೆದ ಸ್ಥಳದ ನಕಾಶೆ.
6) ಆಡಿಯೋ ಕ್ಯಾಸೆಟ್ ಪರಿಶೀಲನಾ ವರದಿ ದಿನಾಂಕ: 26.04.2008 ಮತ್ತು 29.11.2008.
7) ಸಾಕ್ಷಿಗಳ ಹೇಳಿಕೆಗಳು.
8) ಆಪಾದಿತರ ಸಮಜಾಯಿಷಿ ಹೇಳಿಕೆಗಳು.
9) ಶ್ರೀ ರಮೇಶ್ ದೇಸಾಯಿ, ಹಿಂದಿನ ತಹಶೀಲ್ದಾರ್, ಸಿಂಧನೂರು ತಾಲ್ಲೂಕು ರವರ ಹೇಳಿಕೆ ದಿನಾಂಕ:15.10.2007.

**3)** ತನಿಖಾಧಿಕಾರಿಗಳಾದ ಶ್ರೀ ಕೆ.ಎಂ. ಯುಸೂಫ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಯುಕ್ತ ಠಾಣೆ, ರಾಯಚೂರು ಇವರು ಶ್ರೀ ರಮೇಶ್ ದೇಸಾಯಿ, ಹಿಂದಿನ ತಹಸೀಲ್ದಾರ್, ಸಿಂಧನೂರು ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ರಾಯಚೂರು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 4ಗುನ್ನೆ/ಲೋಕ/ಠಾಣೆ/ಆರ್‌ಸಿಆರ್/2007 ರಲ್ಲಿ ಲಂಚ ನಿರೋಧಕ ಕಾಯ್ದೆ 1988ಕಲಂ 7, 13(1)(ಡಿ) ಜೊತೆಯಲ್ಲಿ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

**4)** ಆಪಾದಿತರು ಶ್ರೀ ರಮೇಶ್ ದೇಸಾಯಿ, ಹಿಂದಿನ ತಹಸೀಲ್ದಾರ್, ಸಿಂಧನೂರು ಇವರು ಫಿರ್ಯಾದಿಯಾದ ಶ್ರೀ ಅರಸಪ್ಪ ತಂದೆ ರಾಮಣ್ಣ, ದ್ವಿತೀಯ ದರ್ಜೆ ಸಹಾಯಕರು, ತಹಸೀಲಾರ್ದ್ದರವರ ಕಛೇರಿ, ಸಿಂಧನೂರು ಇವರ ನಿಯೋಜನೆಯನ್ನು ರದ್ದುಪಡಿಸಲು 10,000/–ರೂಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ಮೇಲೆ ಕಾನೂನು ಕ್ರಮವನ್ನು ಕೈಗೊಳ್ಳಲು ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಕ್ರಮಗಳನ್ನು ನಡೆಸಿದ ನಂತರ ದಿನಾಂಕ:15.10.2007 ರಂದು ಸಿಂಧನೂರಿನಲ್ಲಿ ಬೀಸಿದ ಟ್ರ್ಯಾಪ್‌ನ ಹಿನ್ನೆಲೆಯಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 19(1)ರನ್ವಯ ಮಂಜೂರಾತಿಯನ್ನು ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ:1ರ ದಿನಾಂಕ:06.04.2009 ರ ಪತ್ರದಲ್ಲಿ ಕೋರಿರುತ್ತಾರೆ.

**5)** ಸದರಿ ಪ್ರಸ್ತಾವನೆಗೆ ಸಂಬಂಧಿಸಿದ ಕಡತವನ್ನು ಕೂಲಂಕಷವಾಗಿ ಸರ್ಕಾರವು ತನ್ನ ಬುದ್ದಿಯನ್ನು ತೊಡಗಿಸಿ ಪರಿಶೀಲಿಸಲಾಗಿ ತಹಶೀಲ್ದಾರರಾದ ಶ್ರೀ ರಮೇಶ್ ದೇಸಾಯಿ ಇವರು ಲಂಚದ ಹಣಕ್ಕಾಗಿ ಬೇಡಿಕೆ ಮಾಡಿರುವ ಬಗ್ಗೆ ಖಚಿತಪಡಿಸಿಕೊಳ್ಳಲು ಫಿರ್ಯಾದುದಾರರಾದ ಶ್ರೀ ಅರಸಪ್ಪ ರವರಿಗೆ ಸಣ್ಣ ಟೇಪ್ ರೆಕಾರ್ಡರ್ ನೀಡಿ ತಹಸೀಲ್ದಾರ್ ಅವರ ಧ್ವನಿ ಮುದ್ರಿಸಿಕೊಂಡು ಬರಲು ತಿಳಿಸಲಾಗಿತ್ತೆಂದು ಅದರಂತೆ ದೂರುದಾರರು ತಹಸೀಲ್ದಾರರ ಧ್ವನಿಯನ್ನು ದಿನಾಂಕ:11.10.2007 ರಂದು ಸಂಭಾಷಣೆಯನ್ನು ರೆಕಾರ್ಡ್ ಮಾಡಿಕೊಂಡು ಬಂದಿರುವುದಾಗಿ ಫಿರ್ಯಾದುದಾರರಾದ ಶ್ರೀ ಅರಸಪ್ಪ ಇವರು ಟೇಪ್ ರೆಕಾರ್ಡ್‌ನ್ನು ಹಾಜರುಪಡಿಸಿದ್ದು, ಆಡಿಯೋ ಟೇಪನ್ನು ವಿಧಿ ವಿಜ್ಞಾನ ವಿಭಾಗದ ಪರೀಕ್ಷೆಗಾಗಿ ಕಳುಹಿಸಿದ್ದು, ಅದರ

ವರದಿಯಲ್ಲಿ ಈ ಸಂಭಾಷಣೆ ತಾಳೆಯಾಗಿಲ್ಲವೆಂದು ಅಲ್ಲದೆ ಧ್ವನಿಯು ಆಪಾದಿತರ ಧ್ವನಿ ಎಂತಲೂ, ಅಲ್ಲವೆಂತಲೂ ತೀರ್ಮಾನಕ್ಕೆ ಬರಲಾಗಿಲ್ಲವೆಂದು ಅಭಿಪ್ರಾಯ ನೀಡಲಾಗಿದೆ. ದೂರುದಾರರಾದ ಶ್ರೀ ಅರಸಪ್ಪ ರವರು ತಮ್ಮ ಹೇಳಿಕೆಯಲ್ಲಿ ದೂರು ಬರೆದುಕೊಂಡಾಗ ಕಣ್ತಪ್ಪಿನಿಂದ ತಾವು ತಹಸೀಲ್ದಾರ್ ರವರನ್ನು ದಿನಾಂಕ:11.10.2007 ರಂದು ಬೆಳಿಗ್ಗೆ ಭೇಟಿಯಾಗಿದ್ದಾಗಿ ತಪ್ಪು ಬರೆದುಕೊಟ್ಟಿರುವುದಾಗಿದೇ ಎಂದು ಆದರೆ, ಮರುದಿನ ದಿನಾಂಕ:12.10.2007 ಅವರ ಕ್ವಾರ್ಟಸ್ ನಲ್ಲಿ ಭೇಟಿ ಆಗಿರುವುದಾಗಿ ತಿಳಿಸಿರುವುದು ಅನುಮಾನಕ್ಕೆ ಅವಕಾಶ ನೀಡುತ್ತದೆ. ಶ್ರೀ ರಮೇಶ್ ದೇಸಾಯಿ ಇವರು ದಿನಾಂಕ: 11.10.2007 ರಂದು ರಜೆಯ ಮೇಲಿರುವುದು ದೃಢಪಟ್ಟಿರುತ್ತದೆ. ಲಂಚದ ಹಣದ ಬಗ್ಗೆ ಬೇಡಿಕೆ ಇಲ್ಲದೆ ಸ್ವೀಕಾರ ಮಾಡುವ ಪ್ರಶ್ನೆ ಬರುವುದಿಲ್ಲ. ಶ್ರೀ ಅರಸಪ್ಪ ಇವರು ಶ್ರೀ ರಮೇಶ್ ದೇಸಾಯಿ ಇವರು ಲಂಚದ ಹಣ ಕೇಳಿರುವ ಬಗ್ಗೆ ಬೇಡಿಕೆ ಇರುವುದನ್ನು ಟೇಪ್ ರೆಕಾರ್ಡ್‌ರ್‌ನಲ್ಲಿ ಧ್ವನಿ ಮುದ್ರಿಸಿಕೊಂಡಿರುವುದು ವಿಧಿ ವಿಜ್ಞಾನ ಪ್ರಯೋಗಾಲಯದಲ್ಲಿ ಖಚಿತವಾಗಿ ಸಾಬೀತು ಪಡಿಸಿರುವುದಿಲ್ಲ. ಇದರಿಂದ ಶ್ರೀ ರಮೇಶ್ ದೇಸಾಯಿ ಇವರು ಲಂಚ ಸ್ವೀಕಾರದ ಬಗ್ಗೆ ಬೇಡಿಕೆ ಇಟ್ಟಿದ್ದರು ಎಂಬುದು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ದೂರು ನೀಡಿದ ವ್ಯಕ್ತಿಯ ಶ್ರೀಸಾಮಾನ್ಯನಾಗಿರದೇ ಅದೇ ಕಛೇರಿಯ ಒಬ್ಬ ನೌಕರನಾಗಿದ್ದು, ಕ್ರಿಮಿನಲ್ ಹಿನ್ನೆಲೆ ಹೊಂದಿದವನಾಗಿರುತ್ತಾನೆ. ಅವರ ಸ್ವಂತ ಕೆಲಸವನ್ನು ಮಾಡಿಕೊಡದೇ ಇದ್ದುದರಿಂದ ದ್ವೇಷದ ಮನೋಭಾವದ ಈ ಕೃತ್ಯ ಎಸಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

**6)** ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ರಮೇಶ್ ದೇಸಾಯಿ, ಹಿಂದಿನ ತಹಸೀಲ್ದಾರ್, ಸಿಂಧನೂರು ಇವರ ವಿರುದ್ಧ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988 ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಕೋರಿರುವ ಸರ್ಕಾರದ ಅನುಮೋದನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅನುಮತಿ ನೀಡಲು ಸಾಧ್ಯವಿಲ್ಲವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ: 3ರ ದಿನಾಂಕ:05.09.2009ರ ಪತ್ರದಲ್ಲಿ ತಿಳಿಸಲಾಗಿತ್ತು.

**7)** ಆದರೆ ಮೇಲೆ ಓದಲಾದ ಕ್ರಮ ಸಂಖ್ಯೆ:1 ರ ಪತ್ರ ಸ್ವೀಕೃತಿ ದಿನಾಂಕ:31.10.2009ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಅಭಿಯೋಜನಾ ಮಂಜೂರಾತಿಗೆ ನಿರಾಕರಿಸಿದ ಆದೇಶ ವನ್ನು ಪುನರ್ ಪರಿಶೀಲಿಸಿ ಅಭಿಯೋಜನಾ ಮಂಜೂರಾತಿ ಆದೇಶ ನೀಡುವಂತೆ ಕೋರಿದ್ದರು. ಈ ಬಗ್ಗೆ ಸರ್ಕಾರವು ಮತ್ತೊಮ್ಮೆ ಪರಿಶೀಲಿಸಿ ಈ ಪ್ರಕರಣದಲ್ಲಿ ಅಶಿಸ್ತಿನಿಂದ ಇದ್ದ ಸಿಬ್ಬಂದಿಯ ಮೇಲೆ ಶಿಸ್ತು ಪಾಲನೆಗೆ ಪ್ರಯತ್ನಿಸಿದ ಮೇಲಾಧಿಕಾರಿಯ ಮೇಲೆ ಅಭಿಯೋಜನೆಗೆ ಒಳಪಡಿಸಲು ಕೋರಿರುವ ಅನುಮೋದನೆಯನ್ನು ನೀಡಲು ಸಾಧ್ಯವಿಲ್ಲವೆಂದು ಈ ಹಿಂದೆ ಸರ್ಕಾರ ತೆಗೆದುಕೊಂಡ ನಿರ್ಧಾರವು ಸರಿ ಇದ್ದುದಾಗಿ ಪರಿಗಣಿಸಿ ಶ್ರೀಯುತರನ್ನು ಅಭಿಯೋಜನೆಗೆ ಒಳಪಡಿಸಲು ಅಗತ್ಯವಿಲ್ಲವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ :3ರ ದಿನಾಂಕ:16.04.2010ರ ಪತ್ರದಲ್ಲಿ ತಿಳಿಸಲಾಗಿದೆ.

**8)** ಮುಂದುವರೆದು, ಮೇಲೆ ಓದಲಾದ ಕ್ರಮ ಸಂಖ್ಯೆ: 3ರ ದಿನಾಂಕ:17.05.2010 ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಪ್ರಕರಣವನ್ನು ಮತ್ತೊಮ್ಮೆ ಪರಿಶೀಲಿಸಲು ಕೋರಿದ್ದರಿಂದ ಸರ್ಕಾರವು ಸದರಿ ಪ್ರಕರಣವನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲಿಸಿತು.

**9)** ಟ್ರ್ಯಾಪ್ ಪ್ರಕರಣದಲ್ಲಿ ಉಚ್ಛ ನ್ಯಾಯಾಲಯಗಳು ಮತ್ತು ಸರ್ವೋಚ್ಚ ನ್ಯಾಯಾಲಯವು ಅನೇಕ ತೀರ್ಪು ನೀಡಿದ್ದು, ಟ್ರ್ಯಾಪ್ ಪ್ರಕರಣದಲ್ಲಿ ಮುಖ್ಯವಾಗಿ ಈ ಕೆಳಕಂಡ ಅಂಶಗಳು ಒಳಗೊಂಡಿರಬೇಕಾಗುತ್ತದೆ.

1) ಸಾರ್ವಜನಿಕ ನೌಕರ/ಅಧಿಕಾರಿಯು ತನಗೆ ಸಲ್ಲಬೇಕಾದ ಕಾನೂನು ಸಮ್ಮತವಾದ ಸಂಭಾವನೆಗಿಂತ ಹೆಚ್ಚಿನ ಸಂಭಾವನೆಗೆ ಒತ್ತಾಯಿಸಿರಬೇಕು.

2) ಒತ್ತಾಸೆಯಿಂದ ಹಣವನ್ನು ಪಡೆದಿರಬೇಕು.

3) ಲಂಚದ ಹಣವನ್ನು ಸಂಬಂಧಿಸಿದ ಆರೋಪಿತ ಅಧಿಕಾರಿಯ ದೇಹದಿಂದ ವಶಪಡಿಸಿಕೊಂಡಿರಬೇಕು.

4) ಟ್ರ್ಯಾಪ್ ದಿನದಂದು ಯಾವ ಪ್ರಕರಣಕ್ಕೆ ಲಂಚದ ಹಣವನ್ನು ಪಡೆದಿರುತ್ತಾರೋ ಆ ಪ್ರಕರಣವು ಸಂಬಂಧಿಸಿದ ಅಧಿಕಾರಿಯ ಅನುಮೋದನೆಗೆ ಕಾದಿರಬೇಕು ಅಥವಾ ಅವರ ಬಳಿ ಬಾಕಿ ಇರಬೇಕು.

**10)** ಈ ಪ್ರಕರಣವನ್ನು ಪರಿಶೀಲಿಸಿದಾಗ ಈ ಕೆಳಕಂಡ ಅಂಶಗಳು ವೇದ್ಯವಾಗುತ್ತವೆ.

1) ಫಿರ್ಯಾದುದಾರನು ತಹಸೀಲ್ದಾರರು ಹಣವನ್ನು ಬೇಡಿದ್ದಾರೆಂದು ಲೋಕಾಯುಕ್ತ ಪೊಲೀಸರಿಗೆ ನೀಡಿದ ಆಡಿಯೋ ಟೇಪನ್ನು ಪರಿಶೀಲಿಸಿ ವಿಧಿ ವಿಜ್ಞಾನದ ವರದಿಯಲ್ಲಿ ಆಪಾದಿತನ ಸಂಭಾಷಣೆಯು ತಾಳೆಯಾಗಿರುವ ಬಗ್ಗೆ ಖಚಿತವಾಗಿರುವುದಿಲ್ಲ.

2) ದೂರುದಾರನು ಶ್ರೀ ಸಾಮಾನ್ಯನಾಗಿರದೇ ಅದೇ ಕಛೇರಿಯ ಒಬ್ಬ ನೌಕರನಾಗಿದ್ದು, ಕ್ರಿಮಿನಲ್ ಹಿನ್ನೆಲೆ ಹೊಂದಿದವನಾಗಿರುತ್ತಾನೆ.

3) ದೂರುದಾರನು ತನ್ನ ನಿಯೋಜನೆ ರದ್ದುಪಡಿಸಲು ಆಪಾದಿತರು ಹಣ ಕೇಳಿದ್ದಾರೆಂದು ದೂರಿರುತ್ತಾರೆ. ಆದರೆ ಆಪಾದಿತರಿಗೆ ಸದರಿ ನಿಯೋಜನೆಯನ್ನು ರದ್ದುಪಡಿಸುವ ಅಧಿಕಾರ ಇರುವುದಿಲ್ಲ. ಸದರಿ ಅಧಿಕಾರವು ಉಪವಿಭಾಗಾಧಿಕಾರಿಗಳವರಿಗೆ ಇರುತ್ತದೆ.

4) ಟ್ರ್ಯಾಪ್ ದಿನದಂದು ಪ್ರಕರಣಕ್ಕೆ ಸಂಬಂಧಪಟ್ಟ ಕಡತ ಆಪಾದಿತರ ಸುಪರ್ದಿನಲ್ಲಿರುವುದಿಲ್ಲ.

5) ದೂರುದಾರನು ದಿನಾಂಕ: 11.10.2007 ರಂದು ಆಪಾದಿತರನ್ನು ಕ್ವಾರ್ಟಸ್‌ನಲ್ಲಿ ಭೇಟಿಯಾಗಿರುವುದಾಗಿ ತಿಳಿಸಿದ್ದು, ಆದರೆ ಆಪಾದಿತರು ಸದರಿ ದಿನಾಂಕದಂದು ರಜೆಯ ಮೇಲಿದ್ದು, ಕೇಂದ್ರ ಸ್ಥಾನದಲ್ಲಿರಲಿಲ್ಲ.

6) ದೂರುದಾರನ ವಿರುದ್ಧ ಆಪಾದಿತರು ಕರ್ತವ್ಯಲೋಪ ಹಾಗೂ ಮೇಲಾಧಿಕಾರಿಗಳ ಆದೇಶದ ಉಲ್ಲಂಘನೆಯ ಹಿನ್ನಲೆಯಲ್ಲಿ ದಿನಾಂಕ:06.10.2007 ರಂದು ದೂರುದಾರನ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಜಿಲ್ಲಾಧಿಕಾರಿಗಳಿಗೆ ವರದಿ ಸಲ್ಲಿಸಿದ ಹಿನ್ನೆಲೆಯಲ್ಲಿ ದೂರುದಾರನು ಈ ಕ್ರಮಕ್ಕೈಗೊಂಡಿರಬಹುದೆಂದು ಜಿಲ್ಲಾಧಿಕಾರಿಗಳು, ರಾಯಚೂರು ರವರು ತಮ್ಮ ಪತ್ರ ಸಂಖ್ಯೆ: ಕಂದಾಯ1 ಸಿಬ್ಬಂದಿ 148 ಲೋಪ್ರ 2007–08, ದಿನಾಂಕ:16.10.2007 ರಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

7) ಫಿರ್ಯಾದುದಾರನ ಪ್ರಕರಣವು ಆರೋಪಿತ ಅಧಿಕಾರಿಯ ಬಳಿ ಬಾಕಿ ಇರುವುದಿಲ್ಲ

**11)** ಈ ಎಲ್ಲಾ ಅಂಶಗಳನ್ನು ಪರಿಗಣಿಸಿದ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ Ingredients of trap ಲಕ್ಷಣಗಳು ನೆರವೇರಿಲ್ಲದಿರುವುದರಿಂದ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1998 ರ ಸೆಕ್ಷನ್ 19(1)(ಬಿ) ರನ್ವಯ ಒಂದು ಸಲ ಅಭಿಯೋಜನಾ ಮಂಜೂರಾತಿ ನೀಡುವ ಪ್ರಾಧಿಕಾರವು ಅಭಿಯೋಜನಾ ಮಂಜೂರಾತಿಯನ್ನು ನಿರಾಕರಿಸಿದ ನಂತರ ಪುನ: ತನ್ನ ಆದೇಶವನ್ನು ಪುನರ್ ಪರಿಶೀಲಿಸಲು ನಿಹಿತ ಅಧಿಕಾರ ಸರ್ಕಾರಕ್ಕಿಲ್ಲದಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 39 ಎಡಿಇ 2007, ಬೆಂಗಳೂರು ಬೆಂಗಳೂರು, ದಿನಾಂಕ: 23.06.2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಲಂಚ ನಿರೋಧಕ ಕಾಯ್ದೆ 1988 ರ 19(1) (ಬಿ) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ರಮೇಶ್ ದೇಸಾಯಿ, ಹಿಂದಿನ ತಹಶೀಲ್ದಾರ್, ಸಿಂಧನೂರು ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಬೇಕೆಂಬ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಕೋರಿಕೆಯನ್ನು ಸರ್ಕಾರವು ನಿರಾಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್ 1658

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ** : ಎಸ್‌ಜಿಎಸ್‌ವೈ ವಿಶೇಷ ಯೋಜನೆಯಡಿ ಜೆ.ಎಸ್.ಎಸ್. ಮಹಾವಿದ್ಯಾಪೀಠ ಸಂಸ್ಥೆ, ಮೈಸೂರು ಗೆ ಮಂಜೂರಾದ ಕೃಷಿ ಉದ್ಯಮ ಹಾಗೂ ಮಾರುಕಟ್ಟೆ ವ್ಯವಸ್ಥೆ ಮೂಲಕ ಬಡತನ ರೇಖೆಗಿಂತ ಕಡಿಮೆ ಇರುವ ಸ್ವಸಹಾಯ ಗುಂಪುಗಳ ಆದಾಯವೃದ್ಧಿ ಕುರಿತು ಯೋಜನೆಗೆ ರಾಜ್ಯದ ಪಾಲಿನ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ ಜೆ17022/1/ 2009–SGSY-II(SP) ದಿನಾಂಕ 19–02–2010.
2) ಕಾರ್ಯನಿರ್ವಾಹಕ ಕಾರ್ಯದರ್ಶಿ, ಜೆಎಸ್‌ಎಸ್ ಮಹಾವಿದ್ಯಾಪೀಠ, ಮೈಸೂರು ರವರ ಪತ್ರ ಸಂಖ್ಯೆ ಜೆಎಸ್‌ಎಸ್/ಎಸ್‌ಜಿವೈ/ಸಅಬಿ/2010–11 ದಿ:27–05–2010.
3) ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ/01/ಎಸ್‌ಜೆವೈ (Spl) 2009 ಬೆಂಗಳೂರು ದಿನಾಂಕ:30–3–2011.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ವಿಶೇಷ ಯೋಜನೆಯಡಿ ಮೈಸೂರು ಜಿಲ್ಲೆಯ ಜೆಎಸ್‌ಎಸ್ ಸಂಸ್ಥೆಯು ಸಲ್ಲಿಸಿದ ಕೃಷಿ ಉದ್ಯಮ ಹಾಗೂ ಮಾರುಕಟ್ಟೆ ವ್ಯವಸ್ಥೆ ಮೂಲಕ ಬಡತನ ರೇಖೆಗಿಂತ ಕಡಿಮೆ ಇರುವ ಸ್ವಸಹಾಯ ಗುಂಪುಗಳ ಆದಾಯವೃದ್ಧಿ ವಿಶೇಷ ಯೋಜನೆಯ ಪ್ರಸ್ತಾವನೆಗೆ ಮಂಜೂರಾತಿ ನೀಡಿರುತ್ತದೆ. ಸದರಿ ಯೋಜನೆಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಒಟ್ಟು ₹8,94,69,000 ಗಳಿಗೆ ಆರ್ಥಿಕ ಮಂಜೂರಾತಿ ನೀಡಿ, ಓದಲಾಗಿದೆ (1)ರನ್ವಯ ಮೈಸೂರು ಜಿಲ್ಲಾ ಪಂಚಾಯಿತಿಗೆ ಮೊದಲನೇ ಕಂತಿನ ಅನುದಾನವಾಗಿ ₹1,17,43,000 (ಒಂದು ಕೋಟಿ ಹದಿನೇಳು ಲಕ್ಷ ನಲವತ್ತಮೂರು ಸಾವಿರ ₹ಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿದೆ. ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಅನುದಾನ ಭರಿಸಬೇಕಾಗಿದೆ. ಇದರನ್ವಯ, ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಬಿಡುಗಡೆಗೊಳಿಸಿದ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಅನುದಾನ ₹39,14,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದರೆ, ರಾಜ್ಯದ 2010–11ನೇ ಸಾಲಿನ ಆಯವ್ಯಯದಲ್ಲಿ ಮೈಸೂರು ಜಿಲ್ಲಾ ಪಂಚಾಯಿತಿಗೆ ಒದಗಿಸಿದ ರಾಜ್ಯದ ಪಾಲಿನ ಅನುದಾನದ ಲಭ್ಯತೆಗೆ ಸೀಮಿತಗೊಳಿಸಿ ಮೊದಲನೇ ಕಂತಿನ ಅನುದಾನ ₹37,94,000 ಗಳನ್ನು ಓದಲಾಗಿದೆ ಉಲ್ಲೇಖ (3)ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ. ರಾಜ್ಯದ ಪಾಲಿನ ಇನ್ನುಳಿದ ಅನುದಾನ ₹1,20,000 ಗಳನ್ನು 2011–12ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಮೈಸೂರಿಗೆ ನಿಗದಿಪಡಿಸಿದ ಅನುದಾನದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ01 ಎಸ್‌ಜೆವೈ (Spl)2009, ಬೆಂಗಳೂರು, ದಿನಾಂಕ: 15–06–2011

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ವಿಶೇಷ ಯೋಜನೆಯಡಿ 2011–12 ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ಲಭ್ಯವಿರುವ ಅನುದಾನದಲ್ಲಿ ರಾಜ್ಯದ ಪಾಲಿನ ಮೊದಲನೇ ಕಂತಿನ ಬಾಕಿ ಅನುದಾನ ₹1,20,000ಗಳನ್ನು (ಒಂದು ಲಕ್ಷದ ಇಪ್ಪತ್ತು ಸಾವಿರ ₹ಗಳು ಮಾತ್ರ) ಜೆಎಸ್‌ಎಸ್ ಸಂಸ್ಥೆಯ ವಿಶೇಷ ಯೋಜನೆಯಾದ ಕೃಷಿ ಉದ್ಯಮ ಹಾಗೂ ಮಾರುಕಟ್ಟೆ ವ್ಯವಸ್ಥೆ ಮೂಲಕ ಬಡತನ ರೇಖೆಗಿಂತ ಕಡಿಮೆ ಇರುವ ಸ್ವಸಹಾಯ ಗುಂಪುಗಳ ಆದಾಯ ವೃದ್ಧಿಯನ್ನು ಅನುಷ್ಠಾನಗೊಳಿಸುವ ಸಲುವಾಗಿ ಮೈಸೂರು ಜಿಲ್ಲಾ ಪಂಚಾಯಿತಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

₹ಗಳಲ್ಲಿ

| ಕ್ರ ಸಂ | ಜಿಲ್ಲಾ ಪಂಚಾಯಿತಿಯ ಹೆಸರು | [illegible] | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಬಾಕಿ ಅನುದಾನ |
|---|---|---|---|---|---|
| 1 | ಮೈಸೂರು | 407 | 0900ZZ0001 | 1,17,43,000 | 1,20,000 |

**ಷರತ್ತುಗಳು:** ಎಸ್‌ಜಿಎಸ್‌ವೈ ಮಾರ್ಗಸೂಚಿಯಂತೆ ಅನುದಾನವನ್ನು ಉಪಯೋಗಿಸುವುದು.

ಅನುಷ್ಠಾನ ಸಂಸ್ಥೆಗೆ ಸರ್ಕಾರ ಆದೇಶದ ದಿನಾಂಕದಿಂದ 15 ದಿವಸದೊಳಗೆ ಅನುದಾನ ಬಿಡುಗಡೆ ಮಾಡಲು ಕ್ರಮಕೈಗೊಳ್ಳುವುದು.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸದರಿ ವಿಶೇಷ ಯೋಜನೆಗೆ ಮಂಜೂರಾತಿ ನೀಡುವಾಗ ನಿಬಂಧಿಸಿದ ಷರತ್ತುಗಳನ್ನು ತಪ್ಪದೇ ಪಾಲಿಸುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು-01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ-6 ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ)2011-12ನೇ (ಲಿಂಕ್ ಕೋಡ್ 2501-01-198-6-01)" (ಹೊಸ ZP ಕೋಡ್ 2501-01-101-0-13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14-07-2005ರನ್ವಯ ಸೂಚನೆಗಳನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡದೆ ಸ್ವೀಕೃತ ರಸೀದಿ (Payees receipt) ಮೂಲಕ ಪಡೆದು ಎಸ್‌ಜಿಎಸ್‌ವೈ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ಚೆಕ್ ಮೂಲಕ ಸಂಬಂಧಪಟ್ಟ ಸಂಸ್ಥೆಗೆ ಬಿಡುಗಡೆ ಮಾಡತಕ್ಕದ್ದು.

ಮೈಸೂರು ಜಿಲ್ಲಾ ಪಂಚಾಯಿತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನ ಸೆಳೆಯಲು ಕಾನೂನು ರೀತ್ಯಾ ಅಧಿಕಾರ ನೀಡಲಾಗಿದೆ.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಅನುಷ್ಠಾನ ಸಂಸ್ಥೆಯಿಂದ ಪಡೆದು ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ರವರ ಸಹಮತಿ ಸಂಖ್ಯೆ: ಗ್ರಾಅಪ 4 ಪಿಬಿಎಸ್ 2011-12 ದಿನಾಂಕ: 24-05-2011ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ.ಸರ್ಕಾರದ ಜಂಟಿ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಪಿ.ಆರ್ 1659

## LAW, JUSTICE AND HUMAN RIGHTS SECRETARIAT

**Sub :-** Release of Rs. 25 Crores as the first instalment of grants for the year 2011-2012 under the 13th Finance Commission Grants for improvement in Delivery of Justice (Non plan).

**Read:-**
1. Government Order No. LAW 231 LAC 2010, dated 20-01-2010.
2. Government Order No. LAW 231 LAC 2010, dated 30-11-2010.
3. Government Order No. LAW 231 LAC 2010, dated 28-01-2011.
4. Letter No. KSLSA, dated 14.02.2011 from the Member Secretary, Karnataka State Legal Sevice Authority, Bangalore
5. Government Order No. LAW 39 LCE 2011, dated 28-06-2011.
6. Un- Official Note No. FD 45 FCC 2010, dated 15.06.2011

**PREAMBLE:**

In the Implementation of the Guidelines received from the Government of India, regarding release of grant-in-aid for Improvement of Justice Delivery, it has been recommended by the 13th Finance Commission for the constitution of a High Level Monitoring Committee. Accordingly, a High Level Monitoring committee was constituted in Government Order read at (1) above. An amount of Rs. 22.32 Crores was released for Improvement of Administration of Justice in the State in Government Order read at (2) above. For the Training Programme of Public Prosecutors in the State, an amount of Rs. 122 Lakh were released in Government Order read at (3) above. The Member Secretary, State Legal Sevices Authority, in his letter read at (4) above has requested to indicate the "Drawing Authority" and "Counter Signing Authority" for drawing the amount sanctioned in "Government Order read at (3) above. Accordingly, Finance Department was consulted to indicate as to who is the "Drawing Authority" and "Counter Signing Authority" with regard to the release of funds under the 13th Finance Commission grants to (1) Morning and Evening Courts, (2) The Lok Adalat and Legal Aid (3) Training of Judicial Officers (4) Heritage Court Buildings (5) A.D.R. Centre and (6) Court Managers.

2. In Govrnment Order read at (5) above, the 34 Court Manager posts and 136 subordinate staff posts were created in two units of High Court, Bangalore and to the two High Benches at Dharwad, Gulbarga and to each District Courts in the State, finance Department in its U.O. Note read at (6) above agrees to release a sum of Rs. 25.00 Crores, out of Rs. 53.94 Crores as 1st Instalment for the year 2011-12 Under the Head of Account "2014-00-800-1-04-059" for improvement in Delivery of Justice.

3. In view of the facts stated above, after considering the proposal, Government agrees for release of the 1st instalment and hence the following order.

**GOVERNMENT ORDER NO: LAW 231 LAC 2010 BANGALORE, DATED: 28/06/2011.**

In the circumstances explained in the preamble, Government agrees to release a sum of Rs. 25 Crores (Rupees Twenty Five Crores only) being the first instalment of grants for year 2011-2012 under the head of Account : 2014-00-800-1-04-059" 13th Finance Commission Grants for improvement in Delivery of Justice (Non plan) and can draw and utilise the said amount for following activities.

| Sl.No. | Name of the activity | Amount released during 2011-12 (Rs. In Crores) |
|---|---|---|
| 1. | Morning and Evening Court | 0.35 |
| 2. | The Lok Adalat and Legal Aid | 3.34 |
| 3. | Training of Judicial Officers | 2.73 |
| 4. | Training of Public Prosecutors | 1.22 |
| 5. | Heritage Court Buildings | 5.00 |
| 6. | State Judicial Academy | 3.00 |
| 7. | A.D.R. Centre | 7.90 |
| 8. | Court Manager | 1.46 |
| | Total | 25.00 |

2. Department should furnish the Utilisation Certificate after utilising the said amount.

3. This Orders issues with the concurrence of Finance Department vide. U.O. Note No. FD 45 FCC 2010, dated 15.06.2011.

By Order and in the name of the Governor of Karnataka

P.R. 1660

**Syed Abdul Nazeer**

Under Secretary to Government
Department of Law, Justice and
Human Rights (Admn-1)

## COMMERCE AND INDUSTRIES SECRETARIAT

**Sub:** Sanction of VAT loan under 2009-14 policy to M/s. J.K. Cement Works, Muddapur, Bagalkot District – reg.

**Read:**
1. Govt. Order No : CI 43 SPI 1997, dated 01-04-1997.
2. Govt. Order No : CI 13 SPI 2007, dated 22-02-2007.
3. Govt. Order No : CI 53 SPI 2010, dated 19-02-2010.
4. Govt. Order No : CI 53 SPI 2010, dated 21-10-2010.
5. Letter from : Commissioner, Industrial Development and Director of Industries and Commerce, No : ಕೈಅ/ಇ2/ಜೆ.ಕೆ.ಸಿ./ ವ್ಯಾ.ಬ.ಸಾ./96/2010–11, ದಿನಾಂಕ 25–01–2011.

**PREAMBLE :**

Government had approved the establishment of a 2 Million MTPA Cement Plant by M/s. Jaykay Cement Ltd., at Muddapur (Metagud) Village, Mudhol Taluk, Bagalkot District, with an investment of Rs. 300 crores, vide Govt. Order read at (1) above.

M/s. Jaykay Cement Ltd. revised their investment proposal to enhance their plant capacity from 2 MMTPA to 2.5 MMTPA with 25 MW Power Plant and submitted it for Government approval. SHLCC in its meeting held on 28-08-2006 approved the revised investment plan and Govt. Order read at (2) above was issued.

Subsequently, M/s. Jaykay Cement Ltd. revised the above proposal to enhance the plant capacity to 3 MMTPA with change in the name of the Company as M/s. J.K. Cement Works. The proposal was discussed and approved in the 20th SHLCC meeting held on 05-01-2010. Accordingly, Govt. Order referred at (3) above was issued.

Though, the investment proposal of M/s. J.K. Cement Works was approved earlier to 2009, substantial investment took place after 01-04-2009 and the commercial production started in October 2009. M/s. J.K. Cement Works requested the Government to sanction incentives & concessions as per Industrial Policy 2009-14. The subject was examined in the Government and a Govt. Order read at (4) above was issued extending the incentives & concessions to M/s. J.K. Cement Works, Muddapur, Bagalkot District, as per 2009-14 Industrial Policy.

The Commissioner for Industrial Development and Director of Industries & Commerce has recommended vide his letter read at (5) above, to sanction a loan of Rs. 4.68 crores on the gross VAT of Rs. 18.74 crores, which is 25% of the gross VAT paid by the unit from October 2009 to September 2010. Further, he has stated that the unit has got eligibility to avail loan on VAT under Industrial Policy 2009-14.

The proposal of the Commissioner for Industrial Development and Director of Industries & Commerce has been examined in detail.

Hence the following order.

**GOVERNMENT ORDER NO. CI 53 SPI 2010, BANGALORE, DATED 29-06-2011**

In the circumstances as explained in the preamble, Govt. is pleased to accord approval for the release of Rs. 4.15 crores (Rupees Four crores and fifteen lakhs only) as the first instalment of interest free loan against VAT (period covered October 2009 to September 2010) M/s. J.K. Cement Works, Muddapur, Bagalkot District, under Head of Account **"6852-02-800-0-01-394 Loans (Plan) during 2011-12",** subject to the following terms & conditions.

1. Eligibility certificate to be issued and loan agreement to be executed after incorporating the points suggested in the SHLCC meeting dated 20-06-2011.

2. The Gross VAT generated out of the sales made to consumers in the State shall only be considered for calculation of VAT loan.
3. Bank Guarantee and second charge on the assets of the Company to be obtained and monitored.
4. A copy of the eligibility certificate issued and loan documents executed shall be made available to the Government at the time of recommendation of next instalment.
5. To maintain the loan repayment schedule and
6. Yearly recovery report to be sent to Government.

The authorized person on behalf of M/s. J.K. Cement Works, Muddapur, Bagalkot District, is authorized to draw the amount on payee's receipt duly countersigned by Commissioner for Industrial Development and Director of Industries and Commerce Dept.

This order is issued with the concurrence of Finance Department vide U.O. Note No : FD 314 Exp-1/11, dated 11-04-2011 & FD 979 Exp-1/11, dated 16-06-2011.

By Order and in the name of the Governor of Karnataka,
**A.V. SRINIVASA DIKSHIT,**
Desk Officer (Technical Cell),
Commerce & Industries Department.

PR No. 1661

## PERSONNEL AND ADMINISTRATIVE REFORMS SECRETARIAT

**Sub:** Sanction of Medical expenses to the retired Chief Justices and Judges of the High Court of Karnataka.

**Read:**
1. G.O. NO. DPAR 84 SHC 2004, Dated 15-10-2004.
2. G.O. NO. DPAR 84 SHC 2004, Dated 22-09-2006.
3. G.O. NO. DPAR 40 SE Vu Nya 2010, Dated 20-11-2010.
4. Letter No : RPS 71/2002 Dated 11-04-2011 received from the Registrar General, High Court of Karnataka.

**Preamble:**

1. In the Government Order read at 1, 2, & 3 above Government have sanctioned the following facilities to the retired Chief Justices and Judges of the High Court of Karnataka subject to certain conditions.

| Reimbursement of | High Court Judges (Retired) | Chief Justice (Retired) |
|---|---|---|
| Servant Allowance | Rs. 2,500/- P.M. | Rs. 3,000/- P.M. |
| Telephone Charges | Rs. 1,000/- P.M. | Rs. 1,500/- P.M. |
| Medical expenses | Rs. 20,000/- P.A. | Rs. 30,000/- P.A. |

The Registrar General, High Court of Karnataka in his letter read at (4) above, has stated that some of retired Hon'ble Judges have requested the Registry of High Court of Karnataka to request the Government for reimbursement of Medical claims on par with the sitting Judges of the High Court of Karnataka, in view of increase in the cost of medical expenses. Further while enclosing a statement showing medical facilities provided to the retired Hon'ble Chief Justices and Judges by various High Courts of the country, it is stated that many of High Courts are providing the same medical facilities as admissible to sitting Judges. Therefore the Registrar requested to move the Government for issuing orders for reimbursement of medical expenses incurred by the retired Chief Justices and Judges of the High Court of Karnataka on par with the sitting Hon'ble Judges of High Court of Karnataka.

The State Government have examined this proposal and the following order is issued.

**GOVERNMENT ORDER NO.: DPAR 18 SE VU NYA 2011 (P), BANGALORE, DATED: 25-06-2011**

Government in modification of G.O. No. DPAR 40 Se Vu Nya Dated 20-11-2010, are pleased to order extention of the benefit of reimbursement of medical expenes to retired Chief Justices and retired Judges of the High Court of Karnataka as applicable to the sitting Judges of the High Court of Karnataka subject to the following conditions ;

**<u>CONDITIONS</u>**

a) The Chief Justices and Judges have retired from the Karnataka High Court and staying any where in the country
b) The Chief Justices and Judges are not practicing as Senior Advocates ;
c) They are not engaged or re-employed in any Government Assignments/Arbitrators ;
d) The reimbursement of Medical expenses shall be covered by the Karnataka Ministers, Minister of State and Deputy Ministers Medical Attendance Rules, 1958 as applicable to the sitting Chief Justice/Judges of the High Court of Karnataka.

The Registrar General, High Court of Karnataka shall be the drawing and disbursing Officer in respect of the above expenditure preferred by the retired Chief Justices and Judges of the High Court of Karnataka.

The expenditure in this regard is debitable to the head of account "2014-00-102-0-01 High Court Judges".

This Order issues with the concurrence of Finance Department vide its Note No. FD 882 S-1 2001 Dated 15-06-2011.

By Order and in the name of the Governor of Karnataka,
**A.R. VIJAYANANDA SHARMA,**
Under Secretary to Government,
D.P.A.R. (SERVICES-3).

PR No. 1662

Therefore, pending disposal of the appeal, the sentence of imprisonment ordered by the learned sessions judge is suspended and the appellant is ordered to be enlarged on bail subject to her executing a personal bond for a sum of Rs. 25,000/- with one surety for the likesum to the satisfaction of the learned sessions judge.

ಮೇಲೆ ಓದಲಾದ ಕ್ರಮ ಸಂಖ್ಯೆ: (7) ರಲ್ಲಿ ಡಾ: ಭುಜಂಗ ಶಕುಂತಲ ಇವರು ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇವಿ 95 ದಿನಾಂಕ: 26-06-1996 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿ ದಂಡನಾದೇಶವನ್ನು ನಿಲಂಬನೆಯಲ್ಲಿಟ್ಟಿದ್ದರೆ ಅಥವಾ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾರೆ ಎಂಬ ಕಾರಣಕ್ಕಾಗಿ ಶಿಸ್ತುಕ್ರಮವನ್ನು ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿರುವುದಿಲ್ಲವೆಂದು ನಮೂದಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರ ಅನ್ವಯ ಸೂಕ್ತ ದಂಡನೆಯನ್ನು ವಿಧಿಸುವ ಬಗ್ಗೆ ಸದರಿಯವರಿಗೆ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ಅವರಿಂದ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (8) ರಲ್ಲಿ ಡಾ: ಭುಜಂಗ ಶಕುಂತಲ, ನಿವೃತ್ತ ಇವರು ತಮ್ಮ ವಿವರಣೆಯಲ್ಲಿ ನಾನು ಈಗ ಹಿರಿಯ ನಾಗರೀಕಳಾಗಿದ್ದು, ಅನೇಕ ದೈಹಿಕ ಸಮಸ್ಯೆಗಳಿಂದ ಬಳಲುತ್ತಿದ್ದು, 4 ಜನ ಹೆಣ್ಣುಮಕ್ಕಳನ್ನು ನೋಡಿಕೊಳ್ಳಬೇಕಿದ್ದು, ಮಹಿಳಾ ಅಧಿಕಾರಿಯಾಗಿದ್ದು (ನಿವೃತ್ತ) ಅನೇಕ ವೈಯಕ್ತಿಕ ಕ್ಲಿಷ್ಟ ತೊಂದರೆಗಳಿದ್ದುದರಿಂದ ಕರ್ನಾಟಕ ಉಚ್ಚ ನ್ಯಾಯಾಲಯದ ಮೇಲ್ಮನವಿಯ ಅಂತಿಮ ತೀರ್ಪು ಆದೇಶ ಬರುವವರೆಗೆ ಶಿಸ್ತುಕ್ರಮ ಜರುಗಿಸುವುದನ್ನು ತಡೆಹಿಡಿಯುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (9) ರಲ್ಲಿ ಡಾ: ಭುಜಂಗ ಶಕುಂತಲ (ನಿವೃತ್ತ) ಇವರು ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿದ್ದು, ಸದರಿಯವರಿಗೆ ಪ್ರಿನ್ಸಿಪಲ್ ಸೆಷನ್ (ವಿಶೇಷ) ನ್ಯಾಯಾಲಯ, ಬಳ್ಳಾರಿಯು ಸಜಾ ದಂಡನೆಯನ್ನು ವಿಧಿಸಿರುವುದರಿಂದ ಮತ್ತು ಆರೋಪವು ಸಾಬೀತಾಗಿದೆ ಎಂದು ತೀರ್ಮಾನಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ರ ಅನ್ವಯ ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ನೀಡುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (10) ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಸರ್ಕಾರವು ಪ್ರಸ್ತಾಪಿಸುವ ದಂಡನೆಗೆ ತನ್ನ ಸಹಮತಿಯನ್ನು ನೀಡಿದೆ.

ಆದುದರಿಂದ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 09 ಸೇಇವಿ 95 ದಿನಾಂಕ: 26-06-1996 ರಲ್ಲಿ ನಾಗೂರ್ ಮೀರ್ ಎಂಬುವವರ ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನ ಪ್ರಕಾರ ಕ್ರಿಮಿನಲ್ ಮೊಕದ್ದಮೆಯಲ್ಲಿ ಆರೋಪ ಸಾಬೀತಾಗಿದ್ದು, ಸಜೆ ವಿಧಿಸಲ್ಪಟ್ಟ ನೌಕರರು ಮೇಲ್ಮಟ್ಟದ ನ್ಯಾಯಾಲಯದಲ್ಲಿ ತಡೆಯಾಜ್ಞೆ ಪಡೆದುಕೊಂಡಿದ್ದರೂ ಸಹ ಸದರಿ ಮೇಲ್ಮನವಿಯಲ್ಲಿನ ಅಂತಿಮ ತೀರ್ಪಿಗೊಳಪಟ್ಟು ಕೆಳಹಂತದ ನ್ಯಾಯಾಲಯವು ವಿಧಿಸಿರುವ ದಂಡನೆಯ ಹಿನ್ನೆಲೆಯಲ್ಲಿ ಅಂತಹ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214ರ ಅನ್ವಯ ಸದರಿಯವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಅವಕಾಶವನ್ನು ಕಲ್ಪಿಸಿರುವುದರಿಂದ ಅದರಂತೆ ಡಾ: ಭುಜಂಗ ಶಕುಂತಲ ಇವರು ಸಲ್ಲಿಸಿರುವ ಕರ್ನಾಟಕ ಉಚ್ಚನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂಖ್ಯೆ: 345/2009 ರಲ್ಲಿನ ಅಂತಿಮ ತೀರ್ಪಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ರ ಅನ್ವಯ ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆಕುಕ 219 ಎಂಎಸ್ಎ 2005, ಬೆಂಗಳೂರು ದಿನಾಂಕ: 05-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ: ಭುಜಂಗ ಶಕುಂತಲ (ನಿವೃತ್ತ) ಇವರಿಗೆ ಪ್ರಿನ್ಸಿಪಾಲ್ ಸೆಷನ್ (ವಿಶೇಷ) ನ್ಯಾಯಾಲಯ, ಬಳ್ಳಾರಿ ನ್ಯಾಯಾಲಯವು ವಿಶೇಷ ಪ್ರಕರಣ ಸಂಖ್ಯೆ: 39/2006, ತೀರ್ಪು ದಿನಾಂಕ: 09-04-2009 ರಲ್ಲಿ ಸಜಾ ದಂಡನೆಯನ್ನು ವಿಧಿಸಿರುವುದರಿಂದ ಸದರಿಯವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಕ್ರಿಮಿನಲ್ ಅಪೀಲು ಸಂಖ್ಯೆ: 345/2009 ರಲ್ಲಿನ ತೀರ್ಪಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214ರ ಅನ್ವಯ ಡಾ: ಭುಜಂಗ ಶಕುಂತಲ ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 1675

**ಬಿ.ಎಫ್. ಹುಬ್ಬಳ್ಳಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಮೆ: ಸತೀಶ್ ಶುಗರ್ಸ್ ಲಿಮಿಟೆಡ್ ಕಂಪನಿಯ 16 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನಾ ಘಟಕವನ್ನು 34 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ ಇಎನ್ 405 ಎನ್‌ಸಿಇ 2010 ದಿನಾಂಕ: 28-10-2010.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ಎಸ್‌ಎಸ್‌ಎಲ್/2009/1748 ದಿನಾಂಕ: 20-06-2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ: ಸತೀಶ್ ಶುಗರ್ಸ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುನ್ನಾಳ್ ಪಿಜಿ ಗ್ರಾಮದಲ್ಲಿ 16.00 ಮೆಗಾ ವ್ಯಾಟ್ (gross) ಮತ್ತು 8.00 ಮೆಗಾ ವ್ಯಾಟ್ (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನೆ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಮೆ: ಸತೀಶ್ ಶುಗರ್ಸ್ ಲಿಮಿಟೆಡ್ ಇವರ ಸಹ ವಿದ್ಯುತ್ ಸಾಮರ್ಥ್ಯವನ್ನು 34.00 ಮೆಗಾ ವ್ಯಾಟ್ (gross) ಮತ್ತು 22.00 ಮೆ.ವ್ಯಾ. (exportable) ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಆದೇಶಹೊರಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 272 ಎನ್‌ಸಿಇ 2011, ಬೆಂಗಳೂರು, ದಿನಾಂಕ : 01–07–2011**

ಮೆ: ಸತೀಶ್ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುನ್ಯಾಳ್ ಪಿಜಿ ಗ್ರಾಮದಲ್ಲಿ 16.00 ಮೆಗಾ ವ್ಯಾಟ್ (gross) ಮತ್ತು 8.00 ಮೆಗಾ ವ್ಯಾಟ್ (exportable) ಸಹ ವಿದ್ಯುತ್ ಯೋಜನೆಗಾಗಿ ನೀಡಿರುವ ನಿರಾಕ್ಷೇಪಣೆಯನ್ನು 34.00 ಮೆಗಾ ವ್ಯಾಟ್ (gross) ಮತ್ತು 22.00 ಮೆಗಾ ವ್ಯಾಟ್ (exportable) ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ನಿರಾಕ್ಷೇಪಣೆಯನ್ನು ನೀಡಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಸುರೇಶ್.ಬಿ. ಕೃಷ್ಣಪ್ಪನವರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 1676

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನಲ್ಲಿ ತುಂಗಭದ್ರಾ ನದಿಗೆ ಅಡ್ಡಲಾಗಿ ಗರ್ಭಗುಡಿ ಹತ್ತಿರ ಸೇತುವೆ ಸಹಿತ ಬಾಂದಾರ ನಿರ್ಮಾಣ ಕಾಮಗಾರಿಯ ಪರಿಷ್ಕೃತ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ಸಣ್ಣ ನೀರಾವರಿ ಇಲಾಖೆಯಿಂದ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1) ಸಕಾರದ ಆದೇಶ ಸಂಖ್ಯೆ: ಸನೀಇ 53 ಸನೀಗು 98, ದಿನಾಂಕ 14/08/98.
2) ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2005 ದಿನಾಂಕ 12ನೇ ಜನವರಿ 2009.
3) ದಿನಾಂಕ 26/05/2011 ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾಂ4/ಸ.ಇಂ–10/ಗರ್ಭಗುಡಿ/ಪ.ಅಂ./ವರದಿ/20112116

**ಪ್ರಸ್ತಾವನೆ :**

ಹಾವೇರಿ ಜಿಲ್ಲೆಯ (ಹಿಂದೆ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿದ್ದು, ನಂತರ ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕು ಎಂದು ವರದಿ ಮಾಡಲಾಗಿದ್ದ) ರಾಣೆಬೆನ್ನೂರು ತಾಲ್ಲೂಕಿನ ಗರ್ಭಗುಡಿ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ ಸೇತುವೆ ಸಹಿತ ಬಾಂದಾರ ನಿರ್ಮಾಣ ಕಾಮಗಾರಿಯ 830.00 ಲಕ್ಷ ರೂ. ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ಸಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಈ ಕಾಮಗಾರಿಯನ್ನು ನಿರ್ಮಾಣಕ್ಕಾಗಿ ನಬಾರ್ಡ್ ಸಂಸ್ಥೆಯ ಆರ್.ಐ.ಡಿ.ಎಫ್ –VI ರಡಿ ರೂ. 736.20 ಲಕ್ಷಗಳ ಸಾಲ ಸೌಲಭ್ಯವು ಮಂಜೂರಾಗಿತ್ತು. ಈ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಕರ್ನಾಟಕ ರಾಜ್ಯ ನಿರ್ಮಾಣ ನಿಗಮಕ್ಕೆ ಸರ್ಕಾರದ ಆದೇಶ ಸಂಖ್ಯೆ ನೀಇ 53 ಸನೀಗು 91 ದಿನಾಂಕ 20–11–1998 ರಂತೆ ವಹಿಸಲಾಗಿತ್ತು.

ಸದರಿ ನಿಗಮವು ಕಾಮಗಾರಿಯನ್ನು ಪ್ರಾರಂಭಿಸಿ ರೂ. 177.90 ಲಕ್ಷಗಳಷ್ಟು ಕಾಮಗಾರಿಯಲ್ಲಿ ಪ್ರಗತಿ ಸಾಧಿಸಿ ನಂತರ ತಾಂತ್ರಿಕ ಕಾರಣಗಳಿಂದಾಗಿ ಕಾಮಗಾರಿಯನ್ನು ಮೇ 2000 ರಲ್ಲಿ ಸ್ಥಗಿತಗೊಳಿಸಿತು. ಆ ಭಾಗದಲ್ಲಿಯ ರೈತರು ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಕಾಮಗಾರಿಯನ್ನು ಕೈಗೊಳ್ಳುವುದು ಅತ್ಯಾವಶ್ಯಕವೆಂದು ಭಾವಿಸಿ ಕಾಮಗಾರಿಯನ್ನು ಮುಂದುವರೆಸುವ ಬಗ್ಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಲಹೆ/ಸೂಚನೆಗಳಂತೆ ಕ್ರಮ ಕೈಗೊಂಡು 36.75 ಕೋಟಿ ರೂ. ಗಳಿಗೆ ಕಾಮಗಾರಿಯ ಪರಿಷ್ಕೃತ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ **ಜಲಸಂಪನ್ಮೂಲ ಇಲಾಖೆಯಿಂದ** ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಸರ್ಕಾರವು ಯೋಜನೆಗೆ ತಾತ್ವಿಕ ಒಪ್ಪಗೆ ನೀಡಿದೆ. ಸದರಿ ಯೋಜನೆಯ ತಾಂತ್ರಿಕ ವಿವರಗಳನ್ನು ಸಣ್ಣ ನೀರಾವರಿ ಇಲಾಖೆಯು ತಯಾರಿಸಿದ್ದು, ಸದರಿ ಕಾಮಗಾರಿಯನ್ನು ಸಣ್ಣ ನೀರಾವರಿ ಇಲಾಖೆಯಿಂದ ಅನುದಾನ ಒದಗಿಸಿ ಅನುಷ್ಠಾನಗೊಳಿಸುವುದು ಸೂಕ್ತವೆಂದು ಅಭಿಪ್ರಾಯ ವ್ಯಕ್ತವಾಗಿದ್ದರಿಂದ ಈ ಕಾಮಗಾರಿಯನ್ನು ಜಲಸಂಪನ್ಮೂಲ ಇಲಾಖೆ ನಿರ್ವಹಿಸುವುದರ ಬದಲಾಗಿ ಸಣ್ಣ ನೀರಾವರಿ ಇಲಾಖೆ ನಿರ್ವಹಿಸುವ ಕುರಿತು ಪರಿಶೀಲಿಸಿ ಈ ಹಿಂದೆ ತಯಾರಿಸಿದ್ದ ಯೋಜನೆಯ ಪರಿಷ್ಕೃತ ಅಂದಾಜನ್ನು ಈಗಿನ ಸ್ಥಿತಿ ಗತಿಗೆ ಅನುಗುಣವಾಗಿ ಪರಿಷ್ಕರಿಸಿ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿ (2010–11ನೇ ಸಾಲಿನ ದರ ಪಟ್ಟಿಯಂತೆ) ರೂ. 47.10 ಕೋಟಿ ಮೊತ್ತಕ್ಕೆ ಪರಿಷ್ಕೃತ ಅಂದಾಜನ್ನು ತಯಾರಿಸಿ ಅನುಮೋದನೆ ನೀಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಯೋಜನೆಯನ್ನು ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ನಿರ್ವಹಿಸಲು ತೀರ್ಮಾನಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2005, ಬೆಂಗಳೂರು, ದಿನಾಂಕ : 06–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನಲ್ಲಿ ತುಂಗಭದ್ರಾ ನದಿಗೆ ಅಡ್ಡಲಾಗಿ ಗರ್ಭಗುಡಿ ಹತ್ತಿರ ಸೇತುವೆ ಸಹಿತ ಬಾಂದಾರ ನಿರ್ಮಾಣ ಕಾಮಗಾರಿಯ ರೂ. 47.10 ಕೋಟಿ ಪರಿಷ್ಕೃತ ಅಂದಾಜಿಗೆ ಯೋಜನೆಯನ್ನು ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ನಿರ್ವಹಿಸುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : PWD 463 FC-1/11 ದಿನಾಂಕ: 03–06–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1677 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು, ಸಸಿಹಿತ್ಲು ಗ್ರಾಮದ ಗರೋಡಿ ಹತ್ತಿರ ನದೀದಂಡೆ ಸಂರಕ್ಷಣಾ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2010, ದಿನಾಂಕ: 27–11–2010.

**2)** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5/ಸ.ಇಂ–11/ದ.ಜಿ./ಮಂ.ತಾ/ಸಸಿಹಿತ್ಲು/ಗರೋಡಿ/ಪ್ರನೀಕಾ/ಟೆಂಡರ್ ಅನುಮೋದನೆ/2011/2083, ದಿನಾಂಕ: 24–05–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಬಾರ್ಡ್ ಆರ್.ಐ.ಡಿ.ಎಫ್–16 ರಲ್ಲಿ ರೂ. 9458.76 ಲಕ್ಷ ಮೊತ್ತದ 169 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಪೈಕಿ 15.00 ಲಕ್ಷ ಮೊತ್ತದ ಈ ಕಾಮಗಾರಿಯು ಸೇರಿರುತ್ತದೆ. ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಮೈಸೂರು ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ. ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 06–12–2010 |
| ವಾರ್ತಾ ಭಾರತಿ ದಿನ ಪತ್ರಿಕೆ | 11–12–2010 |
| ಹೊಸ ದಿಗಂತ ದಿನ ಪತ್ರಿಕೆ | 12–12–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಇ ಪ್ರೊಕ್ಯೂರ್ ಮೆಂಟ್ ಮುಖಾಂತರ ಭಾಗವಹಿಸಿದ್ದು, ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 14,42,960/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ /ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಕೆ. ಹಸನಬ್ಬ, 1ನೇ ದರ್ಜೆ ಗುತ್ತಿಗೆದಾರರು, ಮಂಗಳೂರು | 15,37,090/– | 6.523 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ ಹಸನಬ್ಬ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.523 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 6.5% ಹೆಚ್ಚಿನ ದರಗಳಿಗೆ ಅಂದರೆ ರೂ. 15,36,752/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 03 ಪ್ರನೀಕಾ 2011 (ತಾಂತ್ರಿಕ), ಬೆಂಗಳೂರು, ದಿನಾಂಕ : 06–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕು, ಸಸಿಹಿತ್ಲು ಗ್ರಾಮದ ಗರೋಡಿ ಹತ್ತಿರ ನದೀದಂಡೆ ಸಂರಕ್ಷಣಾ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 14,42,960/– ಗಳ ಮೆಲೆ ಶೇ. 6.5 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 15,36,752/–ಗಳಿಗೆ (ರೂ. ಹದಿನೈದು ಲಕ್ಷ ಮುವತ್ತಾರು ಸಾವಿರದ ಏಳು ನೂರ ಐವತ್ತೆರಡು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಕೆ ಹಸನಬ್ಬ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1678 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಹಕಾರ ಸಚಿವಾಲಯ

**ವಿಷಯ :** ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ ದಾವಣಗೆರೆ ಜಿಲ್ಲೆ ಇದರ ಆಡಳಿತಗಾರರ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ :** 1) ಸಹಕಾರ ಸಂಘಗಳ ನಿಬಂಧಕರ ಆದೇಶ ಪತ್ರ ಸಂಖ್ಯೆ : ಆನಿ 55 ಕೈಸಸಂ–2/ಆವಿ/2010–11, ದಿನಾಂಕ: 16–09–2010 ಮತ್ತು 29–12–2010.

2) ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ:ಡಿಎಸ್‌ಕೆ ಇಎಸ್‌ಟಿಎಸ್ 68./2008–09, ದಿನಾಂಕ: 16–06–2011.

**ಪ್ರಸ್ತಾವನೆ :**

ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ದಾವಣಗೆರೆ ಜಿಲ್ಲೆ, ಈ ಕಾರ್ಖಾನೆಯ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರನ್ವಯ ರದ್ದುಪಡಿಸಿ, ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರನ್ನು ಆಡಳಿತಗಾರರನ್ನಾಗಿ ದಿನಾಂಕ: 08–01–2010 ರಂದು ನೇಮಕ ಮಾಡಲಾಗಿದೆ. ತದನಂತರ, ಈ ಅವಧಿಯನ್ನು ಉಲ್ಲೇಖ(1)ರ ಆದೇಶದ ಮೇರೆಗೆ ವಿಸ್ತರಿಸಲಾಗಿರುತ್ತದೆ. ಈ ಅವಧಿಯು ದಿನಾಂಕ: 07–07–2011 ರಂದು ಮುಕ್ತಾಯಗೊಳ್ಳಲಿದೆ. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಉಲ್ಲೇಖ(2)ರ ಪತ್ರದ ಮೇರೆಗೆ ಪ್ರಸ್ತಾವವನ್ನು ಸಲ್ಲಿಸಿ, ಸದರಿ ಕಾರ್ಖಾನೆಯನ್ನು ನಿರ್ವಹಿಸಲು ಗುತ್ತಿಗೆದಾರರಿಗೆ ನೀಡಲಾಗಿದ್ದು, ಅವರಿಂದ ಸ್ವೀಕೃತವಾಗುವ ಹಣದಿಂದ ಕಾರ್ಖಾನೆಯ ಪ್ರಮುಖ ಜವಾಬ್ದಾರಿಗಳನ್ನು ಹಾಗೂ ಕರ್ತವ್ಯಗಳನ್ನು ನಿರ್ವಹಿಸಲು ಮತ್ತು ಹಲವಾರು ಗುರುತರವಾದ ಅವ್ಯವಹಾರಗಳು ನಿಯಮ ಮತ್ತು ಉಪನಿಯಮ ಉಲ್ಲಂಘನೆ ಕುರಿತು ಹಿಂದಿನ ಆಡಳಿತ ಮಂಡಳಿಯವರು ಎಸಗಿರುವ ಆರೋಪಗಳಿಗೆ ಸಂಬಂಧಿಸಿದಂತೆ ಅವರ ವಿರುದ್ಧ ಕ್ರಮ ಜರುಗಿಸುವುದು ಹಾಗೂ ಕಾರ್ಖಾನೆಗೆ ಮಾಡಿರುವ ನಷ್ಟದ ಮೊತ್ತ ವಸೂಲು ಮಾಡಲು ಕ್ರಮ ವಹಿಸಬೇಕಾಗಿರುವುದರಿಮದ ಆಡಳಿತಗಾರರ ಅವಧಿಯನ್ನು ದಿನಾಂಕ:08–07–2011 ರಿಂದ ಮೂರು ವರ್ಷಗಳ ಅವಧಿಗೆ ಮುಂದುವರೆಸುವುದು ಅವಶ್ಯವೆಂದು ತಿಳಿಸಿರುತ್ತಾರೆ.

ಈ ಪ್ರಸ್ತಾವವನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶ ಮಾಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 02 ಸಸಕಾ 2011, ಬೆಂಗಳೂರು, ದಿನಾಂಕ : 27–06–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಭದ್ರಾ ಸಹಕಾರಿ ಸಕ್ಕರೆ ಕಾಖಾನೆ ನಿ., ದೊಡ್ಡಬಾತಿ, ದಾವಣಗೆರೆ ಜಿಲ್ಲಾ ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 08–07–2011 ರಿಂದ 07–07–2014 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಭದ್ರಾ ಸಹಕಾರ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ, ದಾವಣಗೆರೆ ಜಿಲ್ಲೆ, ಇದಕ್ಕೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ., ಎಂದರೆ:–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪ ಪ್ರಕರಣ (1)ರಲ್ಲಿನ **"**ಒಂದು ವರ್ಷ**"** ಎಂಬ ಪದಗಳಿಗೆ ಬದಲಾಗಿ **"**ನಾಲ್ಕು ವರ್ಷಗಳು**"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: 2) ಪ್ರಕರಣ 30 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 07–07–2014 ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1679

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಹಿರಿಯ ಆಪ್ತ ಕಾರ್ಯದರ್ಶಿ ಮತ್ತು ಆಪ್ತ ಕಾರ್ಯದರ್ಶಿ (ಗ್ರೇಡ್–1) ಮತ್ತು (ಗ್ರೇಡ್–2) ಪತ್ರಾಂಕಿತ ಆಪ್ತ ಸಹಾಯಕರು, ಹಿರಿಯ ಶೀಘ್ರಲಿಪಿಗಾರರು ಮತ್ತು ಶೀಘ್ರಲಿಪಿಗಾರರ ಹುದ್ದೆಗಳ ಸೃಜನೆ/ಉನ್ನತೀಕರಣದ ಬಗ್ಗೆ

**ಓದಲಾಗಿದೆ :** ದಿನಾಂಕ: 15–3–2011ರಂದು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಕರ್ನಾಟಕ ಸಕಾರ ಸಚಿವಾಲಯದಲ್ಲಿ ಹಿರಿಯ ಶೀಘ್ರ ಲಿಪಿಗಾರರು ಮತ್ತು ಪತ್ರಾಂಕಿತ ಆಪ್ತ ಸಹಾಯಕರು ಹಾಗೂ ಆಪ್ತ ಕಾರ್ಯದರ್ಶಿಗಳ ಹುದ್ದೆಗಳಲ್ಲಿ ಅಧಿಕಾರಿ/ನೌಕರರು ದೀರ್ಘಾವಧಿ ಸೇವೆ ಸಲ್ಲಿಸಿದ್ದರೂ ಸಹಾ ಈ ವೃಂದದ ಅಧಿಕಾರಿ/ ನೌಕರರುಗಳಿಗೆ ಮುಂಬಡ್ತಿ ಪಡೆಯಲು ವಿಳಂಬವಾಗುತ್ತಿರುವುದರಿಂದ, ಈ ಬಗ್ಗೆ ಪರಿಶೀಲಿಸಿ ಈ ವೃಂದಗಳಲ್ಲಿ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲು ಕರ್ನಾಟಕ ಸರ್ಕಾರ ಸಚಿವಾಲಯದ ಹಿರಿಯ ಶೀಘ್ರಲಿಪಿಗಾರರು, ಪತ್ರಾಂಕಿತ ಆಪ್ತ ಸಹಾಯಕರು ಹಾಗೂ ಆಪ್ತ ಕಾರ್ಯದರ್ಶಿಗಳ ಸಂಘವು ಸಲ್ಲಿಸಿರುವ ಮನವಿಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 15–03–2011 ರಂದು ನಡೆದ ಸಭೆಯಲ್ಲಿ ಪರಿಶೀಲಿಸಿ ಹಿರಿಯ ಆಪ್ತ ಕಾರ್ಯದರ್ಶಿ ಎಂಬ ಹೊಸದಾದ ವೃಂದವನ್ನು ಸೃಜಿಸಲು ಹಾಗೂ ಆಪ್ತ ಕಾರ್ಯದರ್ಶಿ (ಗ್ರೇಡ್–1) ಮತ್ತು (ಗ್ರೇಡ್–2) ವೃಂದ, ಹಿರಿಯ ಶೀಘ್ರಲಿಪಿಗಾರರ ವೃಂದದಲ್ಲಿ

ಹುದ್ದೆಗಳನ್ನು ಸೃಜಿಸಲು, ಉನ್ನತೀಕರಿಸಲು ಹಾಗೂ ಶೀಘ್ರಲಿಪಿಗಾರರ ವೃಂದದಲ್ಲಿ ಹುದ್ದೆಗಳನ್ನು ಕಡಿತಗೊಳಿಸಲು ಮತ್ತು ಈ ಎಲ್ಲಾ ವೃಂದಗಳ ವೃಂದಬಲವನ್ನು ನಿಗದಿಪಡಿಸಿ ಮತ್ತು ಹಿರಿಯ ಆಪ್ತ ಕಾರ್ಯದರ್ಶಿ, ಆಪ್ತ ಕಾರ್ಯದರ್ಶಿ (ಗ್ರೇಡ್–1) ಮತ್ತು (ಗ್ರೇಡ್–2) ವೃಂದದ ಅಧಿಕಾರಿಗಳನ್ನು ಮತ್ತು ಪತ್ರಾಂಕಿತ ಆಪ್ತ ಸಹಾಯಕರುಗಳನ್ನು ಯಾವ ಇಲಾಖೆ ಹಾಗೂ ಆಪ್ತ ಶಾಖೆಗೆ ನೇಮಿಸಬಹುದು ಎಂಬ ಬಗ್ಗೆ ಸಹ ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 369 ಸಅಸೇ 2007 (ಭಾಗ) ಬೆಂಗಳೂರು, ದಿನಾಂಕ : 7ನೇ ಜುಲೈ–2011**

ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಹೊಸದಾಗಿ ವೇತನ ಶ್ರೇಣಿ ರೂ. 24450–31800ರ ಹಿರಿಯ ಆಪ್ತ ಕಾರ್ಯದರ್ಶಿ ವೃಂದದೊಂದಿಗೆ ಹಾಗೂ ಪ್ರಸ್ತುತ ಅಸ್ತಿತ್ವದಲ್ಲಿ ಇರುವ ಈ ಕೆಳಕಂಡ ವೃಂದಗಳಲ್ಲಿ ಹುದ್ದೆಗಳ ಸೃಜನೆ ಹಾಗೂ ಉನ್ನತೀಕರಿಸಿ/ ಕಡಿತಗೊಳಿಸಿ ಈ ವೃಂದಗಳಲ್ಲಿನ ವೃಂದಬಲವನ್ನು ನಿಗದಿಪಡಿಸಲಾಗಿದೆ.

| ಕ್ರಮ ಸಂ. | ವೃಂದದ ಪದನಾಮ | ಪ್ರಸ್ತುತ ಅಸ್ತಿತ್ವದಲ್ಲಿ ಇರುವ ಹುದ್ದೆಗಳು | ಹೊಸದಾಗಿ ಸೃಜಿಸಲಾದ ಹುದ್ದೆಗಳು | ಹೊಸದಾಗಿ ಉನ್ನತೀಕರಿಸಲಾದ ಹುದ್ದೆಗಳು | ಹೊಸದಾಗಿ ಉನ್ನತೀಕರಣ ದಿಂದಾಗಿ ಕಡಿತಗೊಂಡ ಹುದ್ದೆಗಳು | ಹೊಸದಾಗಿ ಹುದ್ದೆಗಳ ಸೃಜನೆ/ ಉನ್ನತೀಕರಣದ ನಂತರದ ವೃಂದಬಲ |
|---|---|---|---|---|---|---|
| 1) | ಹಿರಿಯ ಆಪ್ತ ಕಾರ್ಯದರ್ಶಿ (ಹೊಸದಾಗಿ ಸೃಜಿಸಲಾದ ವೃಂದ) | – | 03 | – | – | 03 |
| 2) | ಆಪ್ತ ಕಾರ್ಯದರ್ಶಿ (ಗ್ರೇಡ್–1) | 09 | 09 | – | – | 18 |
| 3) | ಆಪ್ತ ಕಾರ್ಯದರ್ಶಿ (ಗ್ರೇಡ್–2) | 17 | – | 18* | – | 35 |
| 4) | ಪತ್ರಾಂಕಿತ ಆಪ್ತ ಸಹಾಯಕರು | 67 | – | – | 18** | 49 |
| 5) | ಹಿರಿಯ ಶೀಘ್ರಲಿಪಿಗಾರರು | 26 | – | 27*** | – | 53 |
| 6) | ಶೀಘ್ರಲಿಪಿಗಾರರು | 398 | – | – | 27*** | 371 |

* ಪತ್ರಾಂಕಿತ ಆಪ್ತ ಸಹಾಯಕರ ವೃಂದದಿಂದ ಆಪ್ತ ಕಾರ್ಯದರ್ಶಿ (ಗ್ರೇಡ್–2) ವೃಂದಕ್ಕೆ ಉನ್ನತೀಕರಿಸಲಾದ ಹುದ್ದೆಗಳು.

** ಆಪ್ತ ಕಾರ್ಯದರ್ಶಿ (ಗ್ರೇಡ್–2) ವೃಂದಕ್ಕೆ ಹುದ್ದೆಗಳನ್ನು ಉನ್ನತೀಕರಿಸಿದ್ದರಿಂದ ಪತ್ರಾಂಕಿತ ಆಪ್ತ ಸಹಾಯಕರ ವೃಂದದಲ್ಲಿ ಕಡಿತಗೊಂಡ ಹುದ್ದೆಗಳು.

*** ಶ್ರೀಘ್ರಲಿಪಿಗಾರರ ವೃಂದದಿಂದ ಹಿರಿಯ ಶ್ರೀಘ್ರಲಿಪಿಗಾರರ ವೃಂದಕ್ಕೆ ಉನ್ನತೀಕರಿಸಲಾದ ಹುದ್ದೆಗಳು.

**** ಹಿರಿಯ ಶೀಘ್ರಲಿಪಿಗಾರರ ವೃಂದಕ್ಕೆ ಹುದ್ದೆಗಳನ್ನು ಉನ್ನತೀಕರಿಸಿದ್ದರಿಂದ ಶ್ರೀಘ್ರಲಿಪಿಗಾರರ ವೃಂದದಲ್ಲಿ ಕಡಿತಗೊಂಡ ಹುದ್ದೆಗಳು.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ ಅಇ 367 ವೆಚ್ಚ–12/2011 ದಿನಾಂಕ 17–05–2011ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ. ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3)

ಪಿ.ಆರ್. 1680

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ರಾಧಾಕೃಷ್ಣರಾವ್ ಮದನ್‌ಕರ್, ಕೆಎಎಸ್ (ಹಿರಿಯ ಶ್ರೇಣಿ) ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ–ಅಂತಿಮ ಆದೇಶ

**ಓದಲಾಗಿದೆ :** 1. ದಿನಾಂಕ : 14–1–2011 ರ ನೋಟೀಸು ಸಂಖ್ಯೆ : ಸಿಆಸುಇ 125 ಕೆಆಹೋ 2007.
2. ಶ್ರೀ ರಾಧಾಕೃಷ್ಣರಾವ್ ಮದನ್‌ಕರ್ ಇವರ ಲಿಖಿತ ಹೇಳಿಕೆ ದಿನಾಂಕ : 17–2–2011.

ಪ್ರಸ್ತಾವನೆ :

ಶ್ರೀ ರಾಧಾಕೃಷ್ಣರಾವ್, ಮದನ್‌ಕರ್, ಕೆಎಎಸ್ (ಹಿರಿಯ ಶ್ರೇಣಿ), ಅಪರ ಜಿಲ್ಲಾಧಿಕಾರಿ ಮತ್ತು ಅಪರ ಜಿಲ್ಲಾ ದಂಡಾಧಿಕಾರಿ, ರಾಯಚೂರು ಜಿಲ್ಲೆ, ರಾಯಚೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ 1996–97 ರಿಂದ 2005–06 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಪರಿಶೀಲಿಸಲು ಕೆಲವೊಂದು ಅಂಶಗಳ ಹೆಚ್ಚಿನ ಮಾಹಿತಿ ನೀಡುವಂತೆ ಬರೆಯಲಾದ ಸರ್ಕಾರಿ ಪತ್ರಗಳಿಗೆ ಪ್ರತ್ಯುತ್ತರ ನೀಡದೇ ಇರುವುದು ಮತ್ತು 2006–07 ರಿಂದ 2009–10 ನೇ ಸಾಲುಗಳ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಸಕಾಲದಲ್ಲಿ ಸರ್ಕಾರಕ್ಕೆ ಸಲ್ಲಿಸದೇ, ಇವರ ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಸಕಾಲದಲ್ಲಿ ಪರಾಮರ್ಶಿಸಲು ಸಾಧ್ಯವಾಗದೇ 14 ವರ್ಷಗಳ ಕಾಲ ವಿನಾಕಾರಣ ವಿಳಂಬಕ್ಕೆ ಕಾರಣರಾಗಿರುವ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12 ರಡಿ ನೋಟೀಸು ಜಾರಿಗೊಳಿಸುವ ಮೂಲಕ ಶಿಸ್ತು ಕ್ರಮವನ್ನು ಪ್ರಾರಂಭಿಸಲಾಯಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ಶ್ರೀ ರಾಧಾಕೃಷ್ಣರಾವ್ ಮದನ್‌ಕರ್ ರವರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸುತ್ತಾ, ಕಛೇರಿ ಕಾರ್ಯದ ಒತ್ತಡದಿಂದಾಗಿ, ಸ್ಥಿರ ಮತ್ತು ಚರಾಸ್ತಿ ವಿವರಗಳನ್ನು ಸಕಾಲದಲ್ಲಿ ಸಲ್ಲಿಸಲು ವಿಳಂಬವಾಗಿರುತ್ತದೆ ಎಂದು, ಈ ವಿಳಂಬವನ್ನು ಮನ್ನಿಸಿ ಇದಕ್ಕೆ ವಿನಾಯತಿಯನ್ನು ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಮನವಿ ಮಾಡಿರುತ್ತಾರೆ.

ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 125 ಕೆಆಹೊ 07, ಬೆಂಗಳೂರು, ದಿನಾಂಕ : 6–7–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು, ಶ್ರೀ ರಾಧಾಕೃಷ್ಣರಾವ್ ಮದನ್‌ಕರ್, ಕೆಎಎಸ್ (ಹಿರಿಯ ಶ್ರೇಣಿ) ಇವರಿಗೆ ಇನ್ನು ಮುಂದೆ ಈ ರೀತಿ ವರ್ತನೆ ಮಾಡಬಾರದೆಂದು ಸೂಚಿಸುತ್ತಾ, ಪ್ರಕರಣವನ್ನು ಮುಕ್ತಾಯಗೊಳಿಸುತ್ತಾ, ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಟ್ಟಿರುತ್ತದೆ.

ಈ ಶಿಸ್ತು ಕ್ರಮ ಪ್ರಾರಂಭವಾಗದಿದ್ದಲ್ಲಿ, ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–2).

ಪಿ.ಆರ್. 1681

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನವ ಸಂಪನ್ಮೂಲ ನಿರ್ವಹಣಾ ಯೋಜನೆಯ ಬಳಕೆ ಸಂಬಂಧ ಸಿ.ಆ.ಸು.ಇ (ಲೆಪ.ಐಆರ್‌ಎಲ್‌ಎ) ಶಾಖೆಗೆ ಸಂಬಂಧಿಸಿದಂತೆ ನೋಡಲ್/ಹೆಚ್.ಆರ್.ಎಂ.ಎಸ್. ಅಧಿಕಾರಿ ನೇಮಕ ಮಾಡುವ ಬಗ್ಗೆ.

ಪ್ರಸ್ತಾವನೆ :

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಪ.ಐಆರ್‌ಎಲ್‌ಎ) ಶಾಖೆಯಲ್ಲಿ ಮಾನವ ಸಂಪನ್ಮೂಲ ನಿರ್ವಹಣಾ ಯೋಜನೆಯ ಬಳಕೆಯನ್ನು ಮಾಡಲಾಗುತ್ತಿದೆ. ಈ ಬಳಕೆಯ ಸಂಬಂಧ ಇಲಾಖೆಗಳಲ್ಲಿ ನೋಡಲ್/ಹೆಚ್.ಆರ್.ಎಂ.ಎಸ್. ಅಧಿಕಾರಿಗಳನ್ನು ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ.

ಆದುದರಿಂದ ಕೆಳಕಂಡ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 1204 (ಲೆಪ.ಐಆರ್‌ಎಲ್‌ಎ) 2010, ಬೆಂಗಳೂರು, ದಿನಾಂಕ : 5–7–2011**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಪ.ಐಆರ್‌ಎಲ್‌ಎ) ಶಾಖೆಗೆ ಸಂಬಂಧಿಸಿದಂತೆ ಮಾನವ ಸಂಪನ್ಮೂಲ ನಿರ್ವಹಣಾ ಯೋಜನೆಯ ಬಳಕೆಯ ಸಂಬಂಧ ಸರ್ಕಾರದ ಉಪ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ, (ಸೇವೆಗಳು) ಇವರನ್ನು ನೋಡಲ್/ಹೆಚ್.ಆರ್.ಎಂ.ಎಸ್. ಅಧಿಕಾರಿಯನ್ನಾಗಿ ನೇಮಿಸಲಾಗಿದೆ. ಅವರ ಹೆಸರು, ವಿಳಾಸ, ದೂರವಾಣಿ ಸಂಖ್ಯೆ ಮತ್ತು ಇ–ಮೇಲ್ ವಿಳಾಸ ಈ ಕೆಳಕಂಡಂತಿದೆ.

ಶ್ರೀ ಕೆ.ಪಿ. ಮೋಹನ್ ರಾಜ್, ಐ.ಎ.ಎಸ್.,
ಸರ್ಕಾರದ ಉಪ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು)
ಕೊಠಡಿ ಸಂ. 15ಬಿ, ನೆಲ ಮಹಡಿ, ವಿಧಾನಸೌಧ, ಬೆಂಗಳೂರು.
ನೇರ ದೂರವಾಣಿ ಸಂ. : 22353100,
ಆಂತರಿಕ ದೂರವಾಣಿ ಸಂಖ್ಯೆ : 22033401
ಇ–ಮೇಲ್ ವಿಳಾಸ : dsservices@nic.in

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಸ್. ಶ್ರೀಧರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ. (ಲೆಕ್ಕಪತ್ರ, ಐಆರ್‌ಎಲ್‌ಎ).

ಪಿ.ಆರ್. 1682

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್. ನರಸಿಂಹಯ್ಯ, ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ಅಧಿಕಾರಿ, ಸರ್ಕಾರದ ಅಪರ ಕಾರ್ಯದರ್ಶಿ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಇವರ ಹಿಂದಿನ ಸೇವೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ : ED 296 DPI 75, ದಿನಾಂಕ : 12–11–1975
2. ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಅಧಿಸೂಚನೆ ಸಂಖ್ಯೆ : E4-Apt (JCS) 27/75, ದಿನಾಂಕ : 21–11–1975
3. ಅಧಿಸೂಚನೆ ಸಂಖ್ಯೆ : RD 90 ASG 81, ದಿನಾಂಕ : 22–3–1982
4. ಅಧಿಸೂಚನೆ ಸಂಖ್ಯೆ : DPAR 150 SKT 82, ದಿನಾಂಕ : 21–12–1982
5. ಅಧಿಕಾರಿಯವರ ಮನವಿ ದಿನಾಂಕ : 19–6–2010.

ಪ್ರಸ್ತಾವನೆ :

ಶ್ರೀ ಎಸ್. ನರಸಿಂಹಯ್ಯ, ಕೆ.ಎ.ಎಸ್, ಸೂಪರ್ ಟೈಂ ಸ್ಕೇಲ್ ಅಧಿಕಾರಿ, ಇವರು ದಿನಾಂಕ : 19–6–2010 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದಕ್ಕೆ ಲೋಕಸೇವಾ ಆಯೋಗದಿಂದ ನೇಮಕಗೊಳ್ಳುವ ಪೂರ್ವದಲ್ಲಿ ಕೆಳಕಂಡ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿದ್ದು, ಈ ಅವಧಿಗಳನ್ನು ನಿವೃತ್ತಿ ಸೌಲಭ್ಯಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತೆ ಕೋರಿದ್ದಾರೆ.

ಎ) ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು–ದಿನಾಂಕ : 9–12–1975 ರಿಂದ 7–4–1982 ರವರೆಗೆ

ಬಿ) ತಹಶೀಲ್ದಾರ್– ದಿನಾಂಕ : 8–4–1982 ರಿಂದ ದಿನಾಂಕ : 10–1–1983 ರವರೆಗೆ

2) ಶ್ರೀ ಎಸ್. ನರಸಿಂಹಯ್ಯ, ಇವರು ಮನವಿಯೊಂದಿಗೆ ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿಯವರು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ : 12–11–1975ರ ಅಧಿಸೂಚನೆಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಸರ್ಕಾರಿ ಜ್ಯೂನಿಯರ್ ಕಾಲೇಜಿನ ಉಪನ್ಯಾಸಕರಾಗಿ (class-II) ಆಯ್ಕೆಯಾಗಿದ್ದು, ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ : 21–11–1975 ರ ಅಧಿಸೂಚನೆಯಲ್ಲಿ ಕಾಲೇಜುಗಳಿಗೆ ನೇಮಕಾತಿ ಮಾಡಲಾಗಿದೆ. ಅದರಂತೆ ಸದರಿಯವರು ದಿನಾಂಕ : 9–12–1975 ರಿಂದ ಕಾರ್ಯ ನಿರ್ವಹಿಸಿರುತ್ತಾರೆ. ಮೇಲೆ ಓದಲಾದ ಕ್ರಮಾಂಕ (3) ರ ದಿನಾಂಕ : 22–3–82 ರ ಅಧಿಸೂಚನೆಯಲ್ಲಿ ತಹಶೀಲ್ದಾರ್ ವೃಂದಕ್ಕೆ ಆಯ್ಕೆ ಹೊಂದಿರುವುದರಿಂದ ಉಪನ್ಯಾಸಕರ ಹುದ್ದೆಯಿಂದ ದಿನಾಂಕ : 7–4–82 ರಂದು ಬಿಡುಗಡೆ ಹೊಂದಿ ತಹಶೀಲ್ದಾರ್ ವೃಂದದಲ್ಲಿ ದಿನಾಂಕ :8–4–1982 ರಂದು ಕರ್ತವ್ಯಕ್ಕೆ ಹಾಜರಾಗಿದ್ದಾರೆ. ಇದರಿಂದಾಗಿ ಸದರಿಯವರು ಉಪನ್ಯಾಸಕರ ಹುದ್ದೆಯಲ್ಲಿ ದಿನಾಂಕ : 9–12–1975 ರಿಂದ 7–4–1982 ರವರೆಗೆ ಕಾರ್ಯ ನಿರ್ವಹಿಸಿರುತ್ತಾರೆ.

3) ಸದರಿ ಅಧಿಕಾರಿಯವರು ಮೇಲೆ ಓದಲಾದ ಕ್ರಮಾಂಕ (4) ದಿನಾಂಕ : 21–12–1982 ರ ಅಧಿಸೂಚನೆಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಗೆಜೆಟೆಡ್ ಪ್ರೊಬೇಷನರ್ಸ್ ಕೆ.ಎ.ಎಸ್., ಕಿರಿಯ ಶ್ರೇಣಿ ವೃಂದಕ್ಕೆ ಆಯ್ಕೆ ಹೊಂದಿದ್ದು, ನೇಮಕಾತಿ ಆದೇಶ ಹೊರಡಿಸಲಾಗಿದೆ. ಈ ಅಧಿಸೂಚನೆಯನ್ವಯ ಸದರಿ ಅಧಿಕಾರಿಯವರು ತಹಶೀಲ್ದಾರ್ ಹುದ್ದೆಯಿಂದ ದಿನಾಂಕ : 10–1–1983 ರಂದು ಬಿಡುಗಡೆ ಹೊಂದಿ ದಿನಾಂಕ : 10–1–1983 ರಂದು ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದದಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇದರಿಂದಾಗಿ ಸದರಿಯವರು ತಹಶೀಲ್ದಾರ್ ವೃಂದದಲ್ಲಿ ದಿನಾಂಕ : 8–4–1982 ರಿಂದ 10–1–1983 ರವರೆಗೆ ಕಾರ್ಯ ನಿರ್ವಹಿಸಿದ್ದಾರೆ.

4) ಸದರಿ ಅಧಿಕಾರಿಯವರು ಮೇಲ್ಕಂಡ 2 ಹುದ್ದೆಗಳಲ್ಲಿ ನಿರಂತರವಾಗಿ ಕಾರ್ಯ ನಿರ್ವಹಿಸಿದ್ದು, ಈ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿದ ಅವಧಿಯನ್ನು ಕೆ.ಸಿ.ಎಸ್. ನಿಯಮ 224(ಎ) ರಡಿಯಲ್ಲಿ ನಿವೃತ್ತಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಮಂಜೂರು ಮಾಡಲು ಅರ್ಹರಾಗುವುದನ್ನು ಪರಿಗಣಿಸಿ ಈ ಮುಂದಿನಂತೆ ಸರ್ಕಾರವು ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 262 ಆಸೇಇ 2010, ಬೆಂಗಳೂರು, ದಿನಾಂಕ : 2–7–2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಸ್. ನರಸಿಂಹಯ್ಯ, ಕೆ.ಎ.ಎಸ್. ಸೂಪರ್ ಟೈಂ ಸ್ಕೇಲ್ ಅಧಿಕಾರಿ, ಇವರು ಕರ್ನಾಟಕ ಆಡಳಿತ ಸೇವಾ (ಕಿರಿಯ ಶ್ರೇಣಿ) ವೃಂದಕ್ಕೆ ಕರ್ನಾಟಕ ಲೋಕ ಸೇವಾ ಆಯೋಗದಿಂದ ನೇಮಕಾತಿ ಹೊಂದುವ ಪೂರ್ವದಲ್ಲಿ ಸದರಿಯವರು ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕರಾಗಿ (Class-II) ದಿನಾಂಕ : 9–12–1975 ರಿಂದ ದಿನಾಂಕ : 7–4–1982 ರವರೆಗೂ ಹಾಗೂ ತಹಶೀಲ್ದಾರ್ ವೃಂದದಲ್ಲಿ ದಿನಾಂಕ : 8–4–1982 ರಿಂದ ದಿನಾಂಕ : 10–1–1983 ರವರೆಗೆ ಕಾರ್ಯ ನಿರ್ವಹಿಸಿದ ಅವಧಿಯನ್ನು ಪ್ರಸ್ತುತ ಸೇವೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224(ಎ) ರನ್ವಯ ನಿವೃತ್ತಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ದಿನಾಂಕ : 5–3–2011 ಸಂಖ್ಯೆ : FD 01 SRS 2011, ರ ಸರ್ಕಾರಿ ಆದೇಶದಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1683 ಸಿಆಸು ಇಲಾಖೆ. (ಸೇವೆಗಳು–2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ವಿಜಯಕುಮಾರ್ ಎನ್ ತೋರಗಲ್ ಕೆ.ಎ.ಎಸ್. ಅಧಿಕಾರಿ ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ– ಶ್ರೀ ವಿಜಯಕುಮಾರ್ ಎನ್. ತೋರಗಲ್, ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂ : ಸಿಆಸುಇ 97 ಎಸ್ಇಎನ್ 04, ದಿನಾಂಕ : 31–8–2005.

**2.** ಶ್ರೀ ವಿಜಯಕುಮಾರ್ ಎನ್ ತೋರಗಲ್ ಕೆ.ಎ.ಎಸ್. ಅಧಿಕಾರಿರವರ ಲಿಖಿತ ಹೇಳಿಕೆ ದಿನಾಂಕ : 17–9–05.

ಪ್ರಸ್ತಾವನೆ :

ಶ್ರೀ ವಿಜಯಕುಮಾರ್ ಎನ್ ತೋರಗಲ್ ಕೆ.ಎ.ಎಸ್. ಅಧಿಕಾರಿರವರು ಈ ಹಿಂದೆ ಚಿತ್ರದುರ್ಗ ಉಪ ವಿಭಾಗದ ಉಪ ವಿಭಾಗಾಧಿಕಾರಿಯಾಗಿ ಹಾಗೂ ಇತರ ಅಧಿಕಾರಿ/ನೌಕರರು ವಿವಿಧ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಚಿತ್ರದುರ್ಗ ಗ್ರಾಮದ ಸ.ನಂ. 33/7 ರಲ್ಲಿ 10 ಎಕರೆ ಜಮೀನನ್ನು ಆಶ್ರಯ ಯೋಜನೆಯಡಿ ಖರೀದಿಸಲು ನಗರ ಸಭೆಯಿಂದ ಬಂದ ಪ್ರಸ್ತಾವನೆ ಅನುಸರಿಸಿ ದಿನಾಂಕ : 19–7–99 ರಂದು ಖುದ್ದು ಸ್ಥಳ ಪರೀಕ್ಷೆ ಮಾಡಿ ಜಮೀನು ವಾಸಕ್ಕೆ ಯೋಗ್ಯವಾಗಿರುವುದಾಗಿ ವರದಿ ಸಲ್ಲಿಸಿ ಸುಳ್ಳು ದಾಖಲೆ ಸೃಷ್ಟಿಸಿರುವ ಜಮೀನು ಖರೀದಿಗೆ ಕಾರಣರಾಗಿ ಸರ್ಕಾರಕ್ಕೆ ರೂ. 11.00 ಲಕ್ಷ ಆರ್ಥಿಕ ನಷ್ಟ ಉಂಟಾಗಲು ಕಾರಣರಾಗಿರುವ ಕರ್ತವ್ಯಲೋಪದ ಕುರಿತು ವಿಚಾರಣೆ ನಡೆಸಲು ಮೇಲೆ ಕ್ರಮ ಸಂ. (1) ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಇವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಮೇಲೆ ಓದಲಾದ ಕ್ರಮ ಸಂ. (2) ರಲ್ಲಿ ಆಪಾದಿತ ಅಧಿಕಾರಿಗಳು ನೋಟೀಸ್‌ಗೆ ಉತ್ತರ ಸಲ್ಲಿಸಿ ಅವರ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಶ್ರೀ ವಿಜಯಕುಮಾರ್ ಎನ್ ತೋರಗಲ್, ಕೆ.ಎ.ಎಸ್ ಅಧಿಕಾರಿ ಇವರು ತಮ್ಮ ಉತ್ತರದಲ್ಲಿ ದಿನಾಂಕ : 26–6–99 ರಂದು ಚಿತ್ರದುರ್ಗ ಉಪ ವಿಭಾಗಧಿಕಾರಿಯ ಹುದ್ದೆಯ ಪ್ರಭಾರ ವಹಿಸಿಕೊಂಡಿದ್ದು, ಇದಕ್ಕಿಂತ ಪೂರ್ವದಲ್ಲಿ ದಿನಾಂಕ : 17–11–98 ರಂದು ಆಶ್ರಯ ಯೋಜನೆಯ ನಿವೇಶನ ಖರೀದಿ ಪ್ರಸ್ತಾವನೆ ಪ್ರಾರಂಭಗೊಂಡಿರುತ್ತದೆ. ಈ ಅವಧಿಯಲ್ಲಿ ಪ್ರಶ್ನಿತ ಜಮೀನನ್ನು ತಾವು ಗುರುತಿಸುವುದಾಗಲೀ ಪ್ರಸ್ತಾವನೆಯನ್ನು ತಯಾರಿಸಿರುವುದಾಗಲೀ ಖರೀದಿ ಆದೇಶ ಮಾಡುವುದಾಗಲಿ ಮತ್ತು ಹಣ ಪಾವತಿ ಮಾಡುವುದಾಗಲೀ ಹಾಗೂ ಸುಳ್ಳು ದಾಖಲೆಗಳನ್ನು ಸೃಷ್ಟಿಸುದಾಗಲೀ

ಮಾಡಿರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಪ್ರಶ್ನಿತ ಪ್ರಸ್ತಾವನೆಯನ್ನು ಚಿತ್ರದುರ್ಗ ಉಪ ವಿಭಾಗಾಧಿಕಾರಿ ಅಧಿಕಾರ ವಹಿಸಿಕೊಳ್ಳುವುದಕ್ಕಿಂತ ಪೂರ್ವದಲ್ಲಿ ಅಂದರೆ ದಿನಾಂಕ : 26–6–1999 ರಕ್ಕಿಂತ ಮೊದಲು ತಯಾರು ಮಾಡಲಾಗಿದ್ದು, ಚಿತ್ರದುರ್ಗ ಉಪ ವಿಭಾಗಾಧಿಕಾರಿ ಕರ್ತವ್ಯದಿಂದ ಬಿಡುಗಡೆಯಾದ ಏಳು ತಿಂಗಳ ನಂತರ ಪ್ರಶ್ನಿತ ಜಮೀನಿನ ಖರೀದಿ ಆದೇಶ ಹಾಗೂ ಸದರಿ ಆದೇಶದನ್ವಯ ಹಣ ಪಾವತಿ ಮಾಡಲಾಗಿರುವುದರಿಂದ ತಮ್ಮ ಮೇಲೆ ಹೊರಿಸಲಾದ ಆರೋಪದಿಂದ ದೋಷಮುಕ್ತರನ್ನಾಗಿಸಲು ಕೋರಿರುತ್ತಾರೆ. ಆಪಾದಿತ ಅಧಿಕಾರಿ ಸಲ್ಲಿಸಿದ್ದ ಲಿಖಿತ ಉತ್ತರದ ಬಗ್ಗೆ ನಗರಾಭಿವೃದ್ಧಿ ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿತ್ತು. ನಗರಾವೃದ್ಧಿ ಇಲಾಖೆಯು ಅಧಿಕಾರಿ ನೀಡದ್ದ ಸಮಜಾಯಿಷಿಯನ್ನು ಪರಿಶೀಲಿಸಿ ಪ್ರಸ್ತುತ ಪ್ರಕರಣದಲ್ಲಿ ಜಮೀನು ಖರೀದಿಗೆ ಶಿಫಾರಸ್ಸು ಮಾಡಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ಮುಂದುವರೆಸಬಹುದು ಎಂದು ಅಭಿಪ್ರಾಯ ಪಟ್ಟಿರುತ್ತದೆ.

ಈ ಹಿನ್ನೆಲೆಯಲ್ಲಿ ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಲಾಗಿದೆ. ಈ ಪ್ರಕರಣವು ನಡೆದು ಸುಮಾರು 12 ವರ್ಷಗಳು ಕಳೆದಿರುತ್ತದೆ. ಶ್ರೀ ವಿಜಯಕುಮಾರ್ ಎನ್ ತೋರಗಲ್, ಕೆ.ಎ.ಎಸ್ ಇವರು ದಿನಾಂಕ : 26–6–1999 ರಿಂದ 30–11–1999 ರ ವರೆಗೆ ಕೇವಲ 5 ತಿಂಗಳು ಮಾತ್ರ ಚಿತ್ರದುರ್ಗ ಉಪ ವಿಭಾಗಾಧಿಕಾರಿಯಾಗಿ ಕೆಲಸ ನಿರ್ವಹಿಸಿದ್ದು, ಆಗ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಕೋರಿದ ಸ್ಪಷ್ಟೀಕರಣದ ಮೇರೆಗೆ ದಿನಾಂಕ : 14–7–1999 ರಂದು ಇವರು ಸ್ಥಳ ತನಿಖೆ ಮಾತ್ರ ಮಾಡಿರುತ್ತಾರೆ. ಈ ಪ್ರಕರಣದಲ್ಲಿ ಇವರ ಅವಧಿಯಲ್ಲಿ ಜಮೀನನ್ನು ಗುರುತಿಸುವುದಾಗಲೀ ಪ್ರಸ್ತಾವನೆ ಸಿದ್ದಪಡಿಸಿರುವುದಾಗಲೀ ಖರೀದಿ ಮಾಡಿರುವುದಾಗಲೀ ಅಥವಾ ಖರೀದಿ ಹಣ ಪಾವತಿ ಮಾಡಿರುವುದು ಕಂಡು ಬಂದಿರುವುದಿಲ್ಲ. ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 97 ಎಸ್‌ಇಎನ್ 2004 (ಸಿಆಸುಇ 104 ಕೆಇವಿ 2007), ಬೆಂಗಳೂರು, ದಿನಾಂಕ : 6ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ವಿಜಯಕುಮಾರ್ ಎನ್ ತೋರಗಲ್ ಕೆ.ಎ.ಎಸ್. ಅಧಿಕಾರಿ ಅಂದಿನ ಉಪ ವಿಭಾಗಾಧಿಕಾರಿ ಚಿತ್ರದುರ್ಗ ರವರನ್ನು ದಿನಾಂಕ : 31–8–2005 ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸಿ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈ ಬಿಡಲು ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ. (ಸೇವೆಗಳು–2).

ಪಿ.ಆರ್. 1684

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ವೈ.ಬಿ.ಕೃಷ್ಣ, ತಹಶೀಲ್ದಾರ್ ಗ್ರೇಡ್–2 ಇವರಿಗೆ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಶ್ರೀ ವೈ.ಬಿ.ಕೃಷ್ಣ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ : 28–10–2010 ರ ಮನವಿ.
2. ದಿನಾಂಕ : 29–10–2007 ರಂದು ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿನ ನಡವಳಿ.
3. ಸರ್ಕಾರದ ಪತ್ರ ಸಂಖ್ಯೆ : ಕಂಇ 668 ಎಎಸ್‌ಡಿ 2010, ದಿನಾಂಕ : 11–5–2011.
4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಪಿ 219 ಸಿಎನ್‌ಎಸ್ 2010, ದಿನಾಂಕ : 30–5–2011.

ಪ್ರಸ್ತಾವನೆ :

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಂತೆ, ಶ್ರೀ ವೈ.ಬಿ. ಕೃಷ್ಣ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರರವರು ದಿನಾಂಕ : 28–10–2010 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಜೇಷ್ಠತೆಯಲ್ಲಿ ತಮಗಿಂತ ಕಿರಿಯರಾದ ತಹಶೀಲ್ದಾರ ಗ್ರೇಡ್–2 ರವರಿಗೆ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಬಡ್ತಿ ನೀಡಿದ್ದು, ಸರ್ಕಾರದ ಅ.ಜ್ಞಾ. ಸಂಖ್ಯೆ : ಡಿಪಿಎಆರ್ 5 ಎಸ್‌ಆರ್‌ಪಿ 84, ದಿನಾಂಕ : 9–10–1985 ಹಾಗೂ ಡಿಪಿಎಆರ್ 22 ಎಸ್‌ಆರ್‌ಆರ್ 93, ದಿನಾಂಕ : 14–7–1993 ರನ್ವಯ ತಮ್ಮ ಬಡ್ತಿಯನ್ನು ಮೊಹರು ಲಕೋಟೆ ಪ್ರಕ್ರಿಯೆಯಲ್ಲಿ ಒಳಪಡಿಸಲಾಗಿದ್ದು, ತಮ್ಮ ವಿರುದ್ಧ ಬಾಕಿ ಇದ್ದ ಟ್ರಾಪ್ ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶ ಮಾಡಲಾಗಿರುತ್ತದೆ. ತಮ್ಮ ಪ್ರಕರಣವನ್ನು ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಪರಿಗಣಿಸಿ ಜೇಷ್ಠತೆಯಲ್ಲಿ ತಮಗಿಂತ ಕಿರಿಯರಾದ ಅಧಿಕಾರಿಗಳಿಗೆ ಬಡ್ತಿ ನೀಡಿರುವುದರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಪದೋನ್ನತಿ ನೀಡುವಂತೆ ಕೋರಿರುತ್ತಾರೆ.

ತಹಶೀಲ್ದಾರ್ ಗ್ರೇಡ್–2 ವೃಂದದ ಅಧಿಕಾರಿಗಳನ್ನು ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿ ನೀಡುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (2) ಶ್ರೀ ವೈ.ಬಿ.ಕೃಷ್ಣ, ತಹಶೀಲ್ದಾರ್ ರವರು, ಶ್ರೀ ಹೆಚ್. ನಾಗಪ್ಪ, ತಹಶೀಲ್ದಾರ್, ಇವರಿಗಿಂತ ಹಿರಿಯರಾದ್ದರಿಂದ ಪ್ರಕಟಣೆಗೊಂಡಿರುವ ಅಧಿಸೂಚನೆ ಸಂಖ್ಯೆ : ಆರ್‌ಡಿ 12 ಎಎಸ್‌ಡಿ 2001, ದಿನಾಂಕ : 11–6–2007 ರಂತೆ ಶ್ರೀ ಹೆಚ್. ನಾಗಪ್ಪ ತಹಶೀಲ್ದಾರ್ ರವರ ಕ್ರ.ಸಂ. 1318 ಶಿರಸ್ತೇದಾರ್‌ರವರ ವೃಂದದಲ್ಲಿ ಕ್ರ.ಸಂ. 4054, ಗ್ರೇಡ್–2 ತಹಶೀಲ್ದಾರ್ ಅರ್ಹತಾ ದಿನಾಂಕ : 20–11–1995 ರಲ್ಲಿ ನೀಡಿರುವುದರಿಂದ, ಶ್ರೀ ವೈ.ಬಿ.ಕೃಷ್ಣ ರವರಿಗೂ ತಹಶೀಲ್ದಾರ್ ಗ್ರೇಡ್–2 ರಲ್ಲಿ ಸದರಿ ಅಧಿಸೂಚನೆ ಕ್ರಮ ಸಂಖ್ಯೆ : 1285 ಶಿರಸ್ತೇದಾರ್ ವೃಂದದಲ್ಲಿ ಕ್ರ.ಸಂ. 4051 ಅರ್ಹತಾ ದಿನಾಂಕ : 24–4–1995 ಎಂದು ಪರಿಗಣಿಸಬೇಕಾಗಿರುವುದರಿಂದ, ಮಹಾಲೇಖಪಾಲರ ಕಛೇರಿಯಿಂದ ಪಡೆದಿರುವ ಮಾಹಿತಿಯಂತೆ ತಹಶೀಲ್ದಾರ್ ಗ್ರೇಡ್–1 ರಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 74 ಎಟಿಎಸ್ 1995, ದಿನಾಂಕ : 5–1–1996ರ ಆದೇಶದಂತೆ ಮತ್ತು ಕಂಇ 131 ಎಎಸ್‌ಡಿ 2008, ದಿನಾಂಕ :

23–10–2010ರ ಅಧಿಸೂಚನೆಯಲ್ಲಿ ಪ್ರಕಟಣೆಗೊಂಡಿರುವ ಶ್ರೀ ಹೆಚ್. ನಾಗಪ್ಪರವರ ಕ್ರ.ಸಂ. 389 ಆಗಿದ್ದು, ತಹಶೀಲ್ದಾರ್ ಗ್ರೇಡ್–1ಕ್ಕೆ ಅರ್ಹತಾ ದಿನಾಂಕ : 5–1–1996 ಎಂದು ನೀಡಲಾಗಿದೆ.

ದಿನಾಂಕ : 29–10–2007 ರಂದು ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿನ ನಡವಳಿಯಂತೆ ಶ್ರೀ ವೈ.ಬಿ. ಕೃಷ್ಣ, ಇವರ ಸೇವಾ ವಿವರ ಮತ್ತು ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿ, ಇವರು ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿಗೆ ಅರ್ಹರೆಂದು ಸಮಿತಿಯು ಪರಿಗಣಿಸಿ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ ಬಾಕಿ ಇರುವುದರಿಂದ, ಶಿಫಾರಸ್ಸನ್ನು ಮೊಹರಾದ ಲಕೋಟೆಯಲ್ಲಿರಿಸಲು ತೀರ್ಮಾನಿಸಿರುತ್ತದೆ.

ಸರ್ಕಾರದ ಆದೇಶದ ಸಂಖ್ಯೆ : ಕಂಇ 21 ಎಡಿಇ 2003, ದಿನಾಂಕ : 26–10–2010ರಲ್ಲಿ ಇವರ ವಿರುದ್ಧ ದಾಖಲಾದ ಟ್ರಾಪ್ ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದೆ. ಹಾಗೂ ಈ ಹಿಂದೆ ಅಮಾನತ್ತಿನಲ್ಲಿದ್ದ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ. ಈ ಇಲಾಖಾ ವಿಚಾರಣಾ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ನೀಡಲು ಆದೇಶಿಸಿದೆ.

ಶ್ರೀ ವೈ.ಬಿ. ಕೃಷ್ಣ, ತಹಶೀಲ್ದಾರ್ ಇವರ ವಿರುದ್ಧ ಬಾಕಿ ಇದ್ದ ಟ್ರ್ಯಾಪ್ ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದ್ದರಿಂದ ಇವರಿಗೆ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಹೆಚ್. ನಾಗಪ್ಪ ಇವರ ಜೇಷ್ಠತಾ ಸಂಖ್ಯೆ : 4054 ಇವರಿಗೆ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಪದೋನ್ನತಿ ನೀಡಿದ ದಿನಾಂಕ : 24–5–1999 ರ ಪೂರ್ವಾನ್ವಯವಾಗಿ ಪದೋನ್ನತಿ ನೀಡುವ ಕುರಿತು ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ) ನಿಯಮಾವಳಿಗಳು 1978ರ ನಿಯಮ 2(1ಎ) ರನ್ವಯ ಬಡ್ತಿ ನೀಡುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಸರ್ಕಾರದ ದಿನಾಂಕ : 11–5–2011 ರ ಪತ್ರದಲ್ಲಿ, ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ : 30–5–2011ರ ಪತ್ರದಲ್ಲಿ, ಸರ್ಕಾರದ ಪ್ರಸ್ತಾವನೆಯನ್ನು ಆಯೋಗವು ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿರುತ್ತದೆ.

ಪ್ರಸ್ತಾವನೆಯನ್ನು ಮರು ಪರಿಶೀಲಿಸಿದ್ದು, ದಿನಾಂಕ : 29–10–2007 ರಂದು ನಡೆದ ಇಲಾಖಾ ಪದೋನ್ನತಿ ಸಮಿತಿ ಸಭೆಯಲ್ಲಿ ಶ್ರೀ ವೈ.ಬಿ. ಕೃಷ್ಣ, ತಹಶೀಲ್ದಾರ್ ರವರ ವಿರುದ್ಧ ಟ್ರ್ಯಾಪ್ ಪ್ರಕರಣ ಬಾಕಿ ಇದ್ದು, ಸರ್ಕಾರದ ಆದೇಶ ಸಂಖ್ಯೆ : ಕಂಇ 21 ಎಡಿಇ 2003, ದಿನಾಂಕ : 26–6–2010ರಲ್ಲಿ ಸರ್ಕಾರವು ಶ್ರೀ ವೈ.ಬಿ. ಕೃಷ್ಣ, ತಹಶೀಲ್ದಾರ್, ಕೋಲಾರ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಚುನಾವಣಾ ಶಾಖೆ, ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ ಇವರು ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದೆ.

ಆದುದರಿಂದ, ಇವರಿಗೆ ದಿನಾಂಕ : 24–4–1995 ರಿಂದ ತಹಶೀಲ್ದಾರ್ ಗ್ರೇಡ್–2 ವೃಂದದಲ್ಲಿ ಸಕ್ರಮಗೊಳಿಸಿ ಹಾಗೂ ದಿನಾಂಕ : 24–5–1998 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಪೂರ್ವಾನ್ವಯವಾಗಿ ಬಡ್ತಿಯನ್ನು ನೀಡಲು ಸರ್ಕಾರವು ನಿರ್ಧರಿಸಿದ್ದು, ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 668 ಎಎಸ್‌ಡಿ 2010, ಬೆಂಗಳೂರು, ದಿನಾಂಕ : 29–6–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ವೈ.ಬಿ. ಕೃಷ್ಣ ರವರು ಶ್ರೀ ಹೆಚ್. ನಾಗಪ್ಪ ಇವರಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿರುವ ಕಾರಣ ಶ್ರೀ ಹೆಚ್. ನಾಗಪ್ಪ ರವರಿಗೆ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ದಿನಾಂಕ : 20–11–1995 ರಂದು ಬಡ್ತಿ ನೀಡಿ ಸಕ್ರಮಗೊಳಿಸಿದ ರೀತ್ಯಾ ಶ್ರೀ ವೈ.ಬಿ.ಕೃಷ್ಣ ರವರಿಗೂ ಗ್ರೇಡ್–2 ತಹಶೀಲ್ದಾರ್ ಅರ್ಹತಾ ದಿನಾಂಕ : 24–4–1995 ನೀಡಿರುವುದರಿಂದ, ಸದರಿಯವರನ್ನು ತಹಶೀಲ್ದಾರ್ ಗ್ರೇಡ್–2 ಹುದ್ದೆಯಲ್ಲಿ ದಿನಾಂಕ : 24–4–1995 ರಿಂದ ಸಕ್ರಮಗೊಳಿಸಿ ಬಡ್ತಿ ನೀಡಿದೆ ಮುಂದುವರೆದು ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಸದರಿಯವರು ಗ್ರೇಡ್–2 ವೃಂದದಲ್ಲಿ ಕನಿಷ್ಠ 3 ವರ್ಷಗಳು ಅರ್ಹತಾ ಸೇವಾ ಅವಧಿಯನ್ನು ಪೂರೈಸಬೇಕಾಗಿರುವುದರಿಂದ, ದಿನಾಂಕ : 24–5–1998 ರಿಂದ ಅರ್ಹತಾ ದಿನಾಂಕವನ್ನು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ) ನಿಯಮಾವಳಿಗಳು 1978ರ ನಿಯಮ 2(1ಎ) ರನ್ವಯ ತಹಶೀಲ್ದಾರ್ ಗ್ರೇಡ್–2 ಹುದ್ದೆಗೆ ದಿನಾಂಕ : 24–4–1995 ರಿಂದ ಜಾರಿಗೆ ಬರುವಂತೆ ಹಾಗೂ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ದಿನಾಂಕ : 24–5–1998 ರಿಂದ ಜಾರಿಗೆ ಬರುವಂತೆ ಪೂರ್ವಾನ್ವಯವಾಗಿ ಪದೋನ್ನತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1685 ಕಂದಾಯ ಇಲಾಖೆ. (ಸೇವೆಗಳು–3).

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ವಿಜಾಪುರ ಜಿಲ್ಲೆ, ವಿಜಾಪುರ ಇವರ ಪತ್ರ ಸಂ.: ಆರ್‌ಬಿ/ಸಿಎಎಲ್/ಸಿಆರ್–8/2010–11, ದಿನಾಂಕ ....–6–2011.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಬಿಜಾಪುರ ಜಿಲ್ಲೆಯ, ಬಿಜಾಪುರ ತಾಲ್ಲೂಕಿನ ದಾಶ್ಯಾಳ ಗ್ರಾಮದಲ್ಲಿ ಆಸರೆ ಮನೆಗಳ ನಿರ್ಮಾಣಕ್ಕಾಗಿ ಡೀಸೆಲ್ ಜನರೇಟರ್‌ನ್ನು ಬಾಡಿಗೆ ಪಡೆದ ಬಾಬ್ತು ಹಾಗೂ ವಾಟರ್ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡಿದ ಬಾಬ್ತು ಒಟ್ಟು ರೂ. 2,44,760/–ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 400 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ : 05-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಮತ್ತು ವಾಟರ್ ಟ್ಯಾಂಕರ್ ಬಾಬ್ತು ರೂ. 2,44,760/- (ರೂಪಾಯಿ ಎರಡು ಲಕ್ಷದ ನಲವತ್ತನಾಲ್ಕು ಸಾವಿರದ ಏಳುನೂರ ಅರವತ್ತು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235-00-111-0-02 "Public Contributions to the Calamity Relief" ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್-8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

ಪಿ.ಆರ್. 1686 (ವಿ.ನಿ. & ಸೇವೆಗಳು-2)

## ಕಂದಾಯ ಸಚಿವಾಲಯ

**ವಿಷಯ :** ಡಾ॥ ಪ್ರಶಾಂತ ನಾಲ್ವಾರ್, ತಹಶೀಲ್ದಾರ್, ಸವಣೂನೂರು ತಾಲ್ಲೂಕು ಹಾವೇರಿ ಜಿಲ್ಲೆ ಇವರು ಲಂಚ ಪ್ರಕರಣದಲ್ಲಿ ಸಿಲಿಕಿಕೊಂಡ ಹಿನ್ನಲೆಯಲ್ಲಿ ಅವರನ್ನು ಸೇವೆಯಿಂದ ಅಮಾನತ್ತು ಗೊಳಿಸುವ ಬಗ್ಗೆ.

**ಓದಲಾಗಿದೆ :** ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ ಹಾವೇರಿ ಇವರ ಪತ್ರ ಸಂಖ್ಯೆ: ಪಿಐ/ಕ.ಲೋ/ಹಾವೇರಿ/ಸಿಆರ್ ನಂ. 8/2011, ದಿನಾಂಕ 23-05-2011.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 23-05-2011ರ ಪತ್ರದಲ್ಲಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಹಾವೇರಿ ಇವರು ಫಿರ್ಯಾದುದಾರರಾದ ಶ್ರೀ ಮಾರುತಪ್ಪ ರಾಮಕೃಷ್ಣಪ್ಪ ಪವಾರ ಇವರು ಕಳೆದ 25 ವರ್ಷಗಳಿಂದ ಸಾಡಂಬರಮತ್ತೂರು ತಾಲ್ಲೂಕು ಸವಣೂರ ಹಾವೇರಿ ಜಿಲ್ಲೆ ಇಲ್ಲಿ ವಾಸವಾಗಿದ್ದು ಅವರು ಜಮೀನನ್ನು ಖರೀದಿ ಮಾಡಿದ್ದು ಅದನ್ನು ತಮ್ಮ ಹೆಸರಿಗೆ ರಿಜಿಸ್ಟರ್ ಮಾಡಿಸಿಕೊಳ್ಳಲು ಕೇಳಿದಾಗ ನಿನ್ನ ಹೆಸರಿಗೆ ಜಮೀನು ಇರುವುದಿಲ್ಲವಾದ್ದರಿಂದ ಅದರ ಬದಲಿಗೆ ಕೃಷಿ ಕಾರ್ಮಿಕ ಎಂಬ ದೃಢೀಕರಣ ಪತ್ರವನ್ನು ನೀಡಲು ಸಬ್ ರಿಜಿಸ್ಟರ್ ಆಫೀಸಿನವರು ತಿಳಿಸಿದರು. ಅದರಂತೆ ಅವರು ತಹಶೀಲ್ದಾರ್ ರವರಿಗೆ ನೆಮ್ಮದಿ ಕೇಂದ್ರದ ಮೂಲಕ ಕೃಷಿ ಕಾರ್ಮಿಕ ದೃಢೀಕರಣ ಪತ್ರವನ್ನು ನೀಡುವಂತೆ ಕೋರಿ ದಿನಾಂಕ 11-02-2011ರಂದು ಅರ್ಜಿ ಕೊಟ್ಟಿದ್ದರು. ನಂತರ ಅವರು ಅನೇಕ ಸಲ ತಹಶೀಲ್ದಾರ್‌ರವರನ್ನು ಕೇಳಿದಾಗ ಆಯ್ತು ನೋಡೋಣ ಎಂದು ಹೇಳುತ್ತಿದ್ದರು. ಇನ್ನೊಂದು ದಿನ ತಹಶೀಲ್ದಾರ್ ಶ್ರೀ ಪ್ರಶಾಂತ ನಾಲವಾರ ತಹಶೀಲ್ದಾರ್‌ರವರನ್ನು ಭೇಟಿಯಾಗಿ ವಿಚಾರಿಸಿದಾಗ ಅವರು ಯಾರೊಂದಿಗೂ ಅವರು ಮಾತನಾಡಿ ಹದಿನೈದು ಸಾವಿರ ಕೇಳುತ್ತಿದ್ದಾರೆ. ಆದರೆ ಹತ್ತು ಸಾವಿರ ಕೊಡು ನಾನೇ ಮಾಡಿಕೊಡುತ್ತೇನೆ ಎಂದು ಹೇಳಿದರು. ಈ ಹಿನ್ನೆಲೆಯಲ್ಲಿ ಲಂಚ ಕೊಟ್ಟು ಕೆಲಸ ಮಾಡಿಸಿಕೊಳ್ಳಲು ಇಷ್ಟ ಇಲ್ಲದ ಕಾರಣ ದೂರುದಾರರು ಹಾವೇರಿ ಲೋಕಾಯುಕ್ತ ಠಾಣೆಗೆ ದಿನಾಂಕ 17-05-2011 ರಂದು ಬಂದು ಇನ್ಸ್‌ಪೆಕ್ಟರ್ ಬಿ. ಸಿ. ಉಮಾಪತಿ ರವರನ್ನು ಭೇಟಿ ಮಾಡಿ ನಡೆದ ವಿಷಯ ತಿಳಿಸಿರುತ್ತಾರೆ. ಅವರು ದೂರುದಾರರ ಮಾತನ್ನು ಖಚಿತಪಡಿಸಿಕೊಳ್ಳಲು ಅವರಲ್ಲಿದ್ದ ಡಿಜಿಟಲ್ ವಾಯ್ಸ್ ರೆಕಾರ್ಡರನ್ನು ಅವರಿಗೆ ಕೊಟ್ಟು ತನ್ನ ಕೆಲಸದ ಬಗ್ಗೆ ತಹಶೀಲ್ದಾರ್ ರವರಲ್ಲಿ ಹೋಗಿ ಮಾತನಾಡಿಕೊಂಡು ಬರಲು ತಿಳಿಸಿದರು. ಅದರಂತೆ, ದೂರುದಾರರು ಅದೇ ದಿನ ಸವಣೂರಿಗೆ ಹೋಗಿ ತಹಶೀಲ್ದಾರ್ ಶ್ರೀ ಪ್ರಶಾಂತ ನಾಲವಾರ ರವರನ್ನು ಭೇಟಿ ಮಾಡಿ ತನ್ನ ಕೆಲಸದ ಬಗ್ಗೆ ವಿಚಾರಿಸಿದಾಗ ಅವರು ಮೊದಲು 10 ಸಾವಿರ ಕೇಳಿ ನಂತರ ದೂರುದಾರರ ಮನವಿ ಮೇರೆಗೆ 6 ಸಾವಿರ ಕೊಡಲು ಕೇಳಿದರು. ಅದೇ ದಿನ ದೂರುದಾರರು ಅಲ್ಲಿಂದ ಶಿರಹಟ್ಟಿ ತಾಲ್ಲೂಕು ಅಡರಕಟ್ಟಿ ಗ್ರಾಮದಲ್ಲಿ ಸೋದರ ಸಂಬಂಧಿಗಳ ಮದುವೆಗೆ ಹೋಗಿದ್ದು ಮರುದಿನ ಮದುವೆ ಮುಗಿಸಿ ದಿನಾಂಕ 19-05-2011 ರಂದು ಹಾವೇರಿ ಲೋಕಾಯುಕ್ತ ಠಾಣೆಗೆ ಬಂದು ನಡೆದ ವಿಷಯವನ್ನು ಪಿ.ಟಿ. ಶ್ರೀ ಉಮಾಪತಿ ರವರಿಗೆ ತಿಳಿಸಿ ವಾಯ್ಸ್ ರೆಕಾರ್ಡ್‌ರನ್ನು ಅವರಿಗೆ ಕೊಟ್ಟಿರುತ್ತಾರೆ. ಅವರು ಚಾಲೂ ಮಾಡಿ ಸಂಭಾಷಣೆಯನ್ನು ಕೇಳಿ ದೂರುದಾರರ ಕೆಲಸ ಮಾಡಿಕೊಡಲು ತಹಶೀಲ್ದಾರರು ಲಂಚ ಕೇಳಿದ್ದನ್ನು ಖಚಿತಪಡಿಸಿಕೊಂಡು ಅವರ ಮೇಲೆ ಲಿಖಿತ ಫಿರ್ಯಾಧಿಯನ್ನು ಕೊಡಲು ತಿಳಿಸಿದರು ಈ ಬಗ್ಗೆ ದೂರುದಾರರ ತನಿಖಾಧಿಕಾರಿಯ ಮುಂದೆ ಹೇಳಿಕೆ ನೀಡಿದ್ದು ತಹಶೀಲ್ದಾರ್ ಮೇಲೆ ಕ್ರಮಕೈಗೊಳ್ಳಲು ಕೋರಿದ ಮೇರೆಗೆ ಹಾವೇರಿ ಲೋಕಾಯುಕ್ತ ಠಾಣಾ ಗುನ್ಯಾ ನಂ. 8/2011, ಕಲಂ 7 ಪಿ.ಸಿ. ಆಕ್ಟ್ ರೀತ್ಯಾ ಪ್ರಕರಣ ದಾಖಲಾಗಿರುತ್ತದೆ. ತನಿಖಾ ಕಾಲದಲ್ಲಿ ಡಾ॥ ಪ್ರಶಾಂತ ನಾಲವಾರ ಮತ್ತು ಫಿರ್ಯಾದಿ ಶ್ರೀ ಮಾರುತೆಪ್ಪ ಪವಾರ ಇವರ ನಡುವೆ ಲಂಚ ಕೇಳಿದ ವಿಷಯವಾಗಿ ವಾಯ್ಸ್ ರೆಕಾರ್ಡ್‌ರಿನಲ್ಲಿ ರೆಕಾರ್ಡ್ ಆದ ಸಂಭಾಷಣೆಯ ತನಿಖೆಯಲ್ಲಿ ಸುಸ್ಪಷ್ಟವಾಗಿ ಕಂಡುಬಂದಿರುತ್ತದೆ.

ಆಪಾದಿತರಾದ ಡಾ॥ ಪ್ರಶಾಂತ ನಾಲವಾರ ತಹಶೀಲ್ದಾರ್‌ರವರು ದೂರುದಾರರಿಂದ ಲಂಚ ಕೇಳಿ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸಿನವರು ಬೀಸಿದ ಬಲೆಗೆ ಸಿಕ್ಕಿ ಬಿದ್ದಿರುತ್ತಾರೆ. ಈ ಬಗ್ಗೆ ನಡೆಸಿದ ಪ್ರಕರಣದ ಮಹಜರ್, ನೆರಳಿನಂತೆ ಹಿಂಬಾಲಿಸಿದ ನೌಕಾದಾರರ ಹೇಳಿಕೆ ರಾಸಾಯನಿಕ ಪರೀಕ್ಷೆ ವರದಿ, ತನಿಖಾ ಕಾಲದಲ್ಲಿ ಮಾಡಲಾದ ವಿಡಿಯೋಗ್ರಫಿ ಮತ್ತು ಜಪ್ತಿ ಮಾಡಲಾದ ಎಲ್ಲ ಆರ್ಟಿಕಲ್‌ಗಳಲ್ಲಿ ಹಾಗೂ ದಾಖಲೆಗಳಿಂದ ಡಾ॥ ಪ್ರಶಾಂತ ನಾಲವಾರರವರು ದೂರುದಾರರ ಕೆಲಸ ಮಾಡಿ ಕೊಡಲು ಲಂಚ ಪಡೆದಿರುವ ಅಪರಾಧದಲ್ಲಿ ಮೇಲ್ನೋಟಕ್ಕೆ ಸತ್ಯಾಂಶವಿರುವುದು ಕಂಡು ಬಂದಿರುವುದರಿಂದ ಮತ್ತು ಅವರು ಒಬ್ಬ ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ದುರ್ವರ್ತನೆಯನ್ನು ಎಸಗಿರುವುದರಿಂದ ಡಾ॥ ಪ್ರಶಾಂತ್ ನಾಲವಾರ ರವರನ್ನು ಈ ಕೂಡಲೇ ಅಮಾನತ್ತಿನಲ್ಲಿಡಲು ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

ಈ ಹಿನ್ನೆಲೆಯಲ್ಲಿ ಸದರಿ ತಹಶೀಲ್ದಾರ್ ಡಾ॥ ಪ್ರಶಾಂತ ನಾಲವಾರ್ ರವರನ್ನು ತಕ್ಷಣ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 29 ಎಡಿಇ 2011, ಬೆಂಗಳೂರು, ದಿನಾಂಕ : 05–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎ) ರನ್ವಯ ಪ್ರದತ್ತವಾದ ಅಧಿಕಾರವನ್ನು ಸರ್ಕಾರವು ಚಲಾಯಿಸಿ ಡಾ॥ ಪ್ರಶಾಂತ ನಾಲವಾರ್, ತಹಶೀಲ್ದಾರ್, ಸವಣೂರು ತಾಲ್ಲೂಕು, ಹಾವೇರಿ ಜಿಲ್ಲೆ, ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೂ ಸೇವೆಯಿಂದ ಅಮಾನತ್ತುಗೊಳಿಸಿದೆ.

ಈ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಮತ್ತು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಇವರ ಅನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1687 ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಜಿಲ್ಲಾಧಿಕಾರಿಗಳಿಗೆ ಶಿಷ್ಟಾಚಾರ ವೆಚ್ಚಗಳಿಗಾಗಿ ಅನುದಾನ ಬಿಡುಗಡೆ ಬಗ್ಗೆ.

**ಪ್ರಸ್ತಾವನೆ :**

ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು ಶಿಷ್ಟಾಚಾರ ವಿಷಯಗಳನ್ನು ನಿರ್ವಹಿಸುತ್ತಾರೆ. ಶಿಷ್ಟಾಚಾರ ವೆಚ್ಚಗಳಿಗಾಗಿ 2010–11ನೇ ಸಾಲಿನವರೆಗೆ ಪ್ರತಿ ಜಿಲ್ಲೆಗೆ ತಲಾ ರೂ. 2.00 ಲಕ್ಷಗಳ ವಾರ್ಷಿಕ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿತ್ತು. ವೆಚ್ಚವನ್ನು ಭರಿಸಲು ಅನುದಾನ ದರವನ್ನು ಹೆಚ್ಚಿಸುವುದು ಅವಶ್ಯವಿರುತ್ತದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, 2011–12ನೇ ಸಾಲಿನಿಂದ ಬೆಂಗಳೂರು ವಿಭಾಗವನ್ನು ಹೊರತುಪಡಿಸಿದ ವಿಭಾಗೀಯ ಕೇಂದ್ರ ಸ್ಥಾನದ ಜಿಲ್ಲೆಗಳಿಗೆ ವಾರ್ಷಿಕ ತಲಾ ರೂ. 2.00 ಲಕ್ಷಗಳಿಂದ ರೂ. 5.00 ಲಕ್ಷಗಳಿಗೆ ಮತ್ತು ಇತರೆ ಎಲ್ಲಾ ಜಿಲ್ಲೆಗಳಿಗೆ ತಲಾ ರೂ. 2.00 ಲಕ್ಷಗಳಿಂದ ರೂ. 2.50 ಲಕ್ಷಗಳಿಗೆ ಶಿಷ್ಟಾಚಾರ ಅನುದಾನದ ವಾರ್ಷಿಕ ಮೊತ್ತವನ್ನು ಹೆಚ್ಚಿಸಲು ಮತ್ತು ಶಿಷ್ಟಾಚಾರದ ಅನುದಾನದ ಮೊದಲನೇ ಅರ್ಧ ವಾರ್ಷಿಕ ಕಂತನ್ನು ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 26 ಎಂಎಸ್‌ಟಿ 2011, ಬೆಂಗಳೂರು, ದಿನಾಂಕ : 04–07–2011**

2011–12ನೇ ಸಾಲಿನಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಬೆಂಗಳೂರು ವಿಭಾಗವನ್ನು ಹೊರತುಪಡಿಸಿದ ಇತರೆ ಮೂರು ವಿಭಾಗೀಯ ಕೇಂದ್ರಸ್ಥಾನದ ಜಿಲ್ಲೆಗಳಿಗೆ ವಾರ್ಷಿಕ ತಲಾ ರೂ. 2.00 ಲಕ್ಷಗಳಿಂದ ರೂ. 5.00 ಲಕ್ಷ (ರೂಪಾಯಿ ಐದು ಲಕ್ಷಗಳು ಮಾತ್ರ) ಗಳಿಗೆ ಮತ್ತು ಇತರೆ ಎಲ್ಲಾ ಜಿಲ್ಲೆಗಳಿಗೆ ತಲಾ ರೂ. 2.00 ಲಕ್ಷಗಳಿಂದ ರೂ. 2.50 ಲಕ್ಷ (ರೂಪಾಯಿ ಎರಡು ಲಕ್ಷದ ಐವತ್ತು ಸಾವಿರಗಳು ಮಾತ್ರ) ಗಳಿಗೆ ಶಿಷ್ಟಾಚಾರ ಅನುದಾನದ ವಾರ್ಷಿಕ ಮೊತ್ತವನ್ನು ಹೆಚ್ಚಿಸಲಾಗಿದೆ.

2011–12ನೇ ಸಾಲಿಗಾಗಿ ಈ ಕೆಳಗಿನ ಜಿಲ್ಲೆಗಳಿಗೆ ಅವುಗಳ ಎದುರಿಗೆ ನಮೂದಿಸಿರುವಂತೆ ಶಿಷ್ಟಾಚಾರ ಅನುದಾನದ ಮೊದಲನೇ ಅರ್ಧ ವಾರ್ಷಿಕ ಕಂತನ್ನು ಬಿಡುಗಡೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| 1 | ಬೆಂಗಳೂರು ನಗರ | 1.25 |
| 2 | ಬೆಂಗಳೂರು ಗ್ರಾಮಾಂತರ | 1.25 |
| 3 | ಚಿಕ್ಕಬಳ್ಳಾಪುರ | 1.25 |
| 4 | ರಾಮನಗರ | 1.25 |
| 5 | ಕೋಲಾರ | 1.25 |
| 6 | ತುಮಕೂರು | 1.25 |
| 7 | ಚಿತ್ರದುರ್ಗ | 1.25 |
| 8 | ಶಿವಮೊಗ್ಗ | 1.25 |
| 9 | ದಾವಣಗೆರೆ | 1.25 |
| 10 | ಮೈಸೂರು | 2.50 |
| 11 | ಮಂಡ್ಯ | 1.25 |
| 12 | ಚಾಮರಾಜನಗರ | 1.25 |
| 13 | ಕೊಡಗು | 1.25 |
| 14 | ದಕ್ಷಿಣ ಕನ್ನಡ | 1.25 |
| 15 | ಉಡುಪಿ | 1.25 |

| | | |
|---|---|---|
| 16 | ಹಾಸನ | 1.25 |
| 17 | ಚಿಕ್ಕಮಗಳೂರು | 1.25 |
| 18 | ಬೆಳಗಾಂ | 2.50 |
| 19 | ಉತ್ತರ ಕನ್ನಡ | 1.25 |
| 20 | ಗದಗ | 1.25 |
| 21 | ಧಾರವಾಡ | 1.25 |
| 22 | ಬಾಗಲಕೋಟೆ | 1.25 |
| 23 | ವಿಜಾಪುರ | 1.25 |
| 24 | ಹಾವೇರಿ | 1.25 |
| 25 | ಗುಲ್ಬರ್ಗಾ | 2.50 |
| 26 | ರಾಯಚೂರು | 1.25 |
| 27 | ಕೊಪ್ಪಳ | 1.25 |
| 28 | ಬೀದರ್ | 1.25 |
| 29 | ಬಳ್ಳಾರಿ | 1.25 |
| 30 | ಯಾದಗಿರಿ | 1.25 |
| | ಒಟ್ಟು | 41.25 |

ಈ ವೆಚ್ಚವನ್ನು 2053–00–093–1–01–059 (ಯೋಜನೇತರ) ಲೆಕ್ಕಶೀರ್ಷಿಕೆಯಡಿ ಭರಿಸತಕ್ಕದ್ದು.

ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ವಿನಿಯೋಗಿಸತಕ್ಕದ್ದು. ವಿನಿಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಮತ್ತು ಮಹಾಲೇಖಪಾಲರಿಗೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್‌ಡಿ 235 ವೆಚ್ಚ–7/2010, ದಿನಾಂಕ 27–06–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ)

ಪಿ.ಆರ್. 1688

## ENERGY SECRETARIAT

**Sub :** Sourcing and supply of Liquefied Natural Gas (LNG) to Karnataka Power Corporation Limited's (KPCL) Bidadi Combined Cycle Power Plant (BCCPP)

**Read :** Letter No. A1 Q5 D/4388 dated 20-12-2010, No. A1 Q5 D/238, dated 12-04-2011 and No. A1 Q5 D dated 13-05-2011 of Managing Director, Karnataka Power Corporation Limited.

**Preamble:**

1. Government had approved the implementation of Gas fired Bidadi combined Cycle Power Plant to Karnataka Power Corporation Ltd., (KPCL), which was enhanced from 700 MW to 1400 MW vide GO No. DE 29 PPC 2001, dated 30-10-2003.

2. In the letters read at above, Managing Director, Karnataka Power Corporation Limited has stated that a meeting was convened on 01-10-2010 under the Chairmanship of Chief Secretary, Government of Karnataka to discuss regarding Natural Gas pricing scenario options for supply to KPCL.

After detailed deliberations on all issues including the risks involved and mitigation of risk on the procurement of LNG, it was concluded as follows:

- *"The procurement of LNG to meet the 100% requirement of 1400 MW Bidadi CCPP is not affordable, due to the high cost tariff to the consumers of the State;*
- *First phase of Bidadi Gas Power station shall have an installed capacity of 700 MW as one block only;*
- *To procure LNG for the first block of 700 MW through GAIL with the following options for cost effective procurement of LNG to KPCL:*
  - *i) An extent of 50% quantity (i.e. 350 MW) on medium term contract (5/7 years) with take or pay and supply or pay obligation and the balance 50% (i.e. 350 MW) on spot market basis;*
  - *ii) If option (I) becomes unreasonably costly, LNG can be purchased 100% on spot market basis to meet the 700 MW generation;*
- *"However, a clarification from GAIL could be obtained whether the transmission pipeline charges/fixed charges have to be paid in case the generation from the plant is stopped.*

3. The Board of KPCL noted the recommendations of the Committee headed by the Chief Secretary regarding tie up of supply of LNG by M/s GAIL, the feasibility or restricting the gas purchase to a quantity adequate for one module of 700 MW at the

proposed BCCP, the financial implications involved, the consequential need to modify the scope of the EPC tender under process and the desirability of taking fresh techno commercial and price bids from the existing nine pre-qualified bidders for the modified scope. The KPCL Board through circular resolutions has Resolved as follows:

*a) To accept the report of the Committee headed by the Chief Secretary in principle and to authorize the Sub-committee to discuss further with M/s GAIL regarding the modalities of gas procurement /purchase and transportation to site and to come up with specific proposals for the consideration of the Board;*

*b) That under the changed circumstances, the existing techno commercial and price bids for the 1400 MW EPC tender of the BCCP be cancelled and fresh offers invited from the existing nine pre-qualified bidders for EPC Works of one module of 700±20% MW Combined Cycle Point at Bidadi;*

*c) The Managing Director be and is hereby authorized to recommend to KPC Bidadi Power Corporation Ltd. to re do the tender process from the stage of inviting fresh offers from the nine pre-qualified bidders for the modified scope of 700±20% MW and to process the bids further"*

4. Further, KPCL in the note has given the following justification for implementation of the Gas based power project:

i) In Karnataka the major power projects are with a mix of Hydro and Coal based thermal projects and non-conventional like Wind, Solar, Mini hydels, Co-generation, Bio-mass. However, Karnataka State does not have Gas based project even though gas based projects are under operation/implementation in the Southern State like Andhra Pradesh. The generation in Hydro Stations would depend on monsoon, which affects during the worst monsoon period. In order to mitigate such eventuality, it is feasible to implement Gas based project in addition to the coal based thermal power projects.

ii) The first year tariff of the coal based power projects which are commissioned in the year 2014-15 in the State of Karnataka are in the range of 350 paise per Kwh to 375 paise per Kwh. However, proposed thermal projects are getting exposed to procurement of imported coal, which are high risk on account of price, quality and availability of the coal.

iii) The present technology of Gas Turbine Generators for Gas based power projects are highly efficient as compared to coal based power projects, which is also a Green Power Project without pollution. In future Green Power Projects are more advantageous than coal based power projects keeping in view of the global warming.

iv) Bidadi CCPP is near to the load centre, which reduces the transmission loss to the power sector of the State in the range of 3% to 3.5% compared to the present transmission loss of the State, which is around 4%.

v) An MoU has been signed between GAIL and Infrastructure Development Department of Government of Karnataka, on 29-04-2009 to facilitate the smooth implementation of the pipeline projects, with an anchor load of Bidadi CCPP, laying of Gas pipeline would facilitate to provide city Gas connection to the consumers of the State, which improves the overall economy and GDP of the State.

5. The above proposal was examined with respect to the following financial and economic aspects;

i) LNG Price

ii) Associated risks, and their mitigation and management

iii) Relative LNG Cost based on "Medium Term contract" or "Short Term Spot Market Purchase",

iv) Procurement of LNG,

v) Affordability of proposal for KPCL/ESCOMs/GOK, and

vi) Rationale for setting up gas based power plant

6. Further, the above proposal was reviewed in detail, the likely high cost power generated in the proposed Gas Plant, the financial risks involved in procuring the gas on long term contract and the risks involved in the spot procurement of gas. Government also took note of the fact that the spot procurement will reduce the financial risks, but may pose difficulties in regular procurement. However, while noting the need to have more than one source of fuel for power generation to ensure future energy requirement, the need to meet the peak load demand and the need for clean energy source. Hence the following orders

**Government Order No. EN 78 PPC 2010, Bangalore, dated 05-07-2011**

In the circumstances explained in the Preamble, the approval is accorded for the following:

a) To proceed with the implementation of the first block of Gas based 1x700 MW ± 20% Bidadi Combined Cycle Power Plant on Liquefied Natural Gas (LNG) fuel;

b) To procure Liquefied Natural Gas (LNG) for the first block of 700 MW ± 20% through 100% on spot market basis, on continuous as & when required through GAIL/IOCL or any other organization to be chosen by the Committee headed by the Chief Secretary of Karnataka, duly exempting Karnataka Power Corporation Limited from the KTPP Act;

c) To enter into a Gas Transportation Agreement (GTA) with GAIL for transportation of gas for $1^{st}$ block of 700 MW± 20% capacity, duly exempting Karnataka Power Corporation Limited from the KTPP Act;

d) The decision on fixing of cap on the GAIL transmission charges shall be taken by the Committee held under the Chairmanship of the Chief Secretary.

e) If the power plant is not operated due to high cost of gas resulting in high cost of power then around Rs. 480 Crores per year will be given to Karnataka Power Corporation Limited to service the debt of Rs. 3712 Cores. Similarly, GAIL

transmission charges of Rs. 226 Crores/year will be paid Hence, the State Government agree to support Karnataka Power Corporation Limited to an approximate extent of Rs. 706 crores per annum, besides providing guarantee for the debt, if required,

f) To allocate the entire power generated from the Bidadi combined Cycle Power Plant to Bangalore Electricity Supply Company (BESCOM) since the plant is near to the load center, which could accommodate the requirement of peak load.

g) Bangalore Electricity Supply Company may file necessary tariff petition before the Karnataka Electricity Regulatory Commission (KERC) for fixing of appropriate tariff for selling the power received from this project.

By Order and in the name of the Governor of Karnataka
**Suresh, B. Krishnappanavar**
Under Secretary to Government
Energy Department

P.R. 1689

**ENERGY SECRETARIATE**

**Sub :-** Transfer of 1.70 MW Wind Power Capacity in favour of M/s. Bright Packaging Private Limited – reg.

**Read :-** 1. Government Order No: EN 337 NCE 2006 dated: 16/10/2006
2. Government Order No: EN 9 NCE 2007 dated: 12/01/2007.
3. Government Order No: EN 432 NCE 2010 dated: 16/12/2010.
4. Letter No: KRED/08/BPPL-1.7 MW (GNS-25&26)-RSR (30.6)/2011/1922 dated: 02/04.7.2011.

**Preamble:**

In the Government Order read at (1) above, sanction has been accorded for implementation of 63.00 MW capacity Wind Power Project at Shimoga, Bellary and Belgaum Distirct in favour of M/s. R. Sree Ramulu Reddy & Co.

In the Government Order read at (2) above, permission has been accorded for the change of company's name from M/s R. Sree Ramulu Reddy & Co. to M/s RSR Power Private Limited.

In the Government Order read at (3) above, sanction has been accorded for enhancement of wind power capacity from 7.00 MW to 30.60 MW at Shirgaon, Naghral and Girgaon of Belgaum Districts in favour of M/s RSR Power Private Limited.

In the letter read at (4) above, the Managing Director, Karnataka Renewable Energy Development Limited, Bangalore has recommended for transfer of 1.70 MW Wind Power capacity from out of 30.60 MW allotted to M/s. RSR Power Pvt Ltd. In favour of M/s. Bright Packaging Private Limited.

The proposal has been examined in detail and hence the following order.

**Government Order No: EN 291 NCE 2011, Bangalore, Date: 06/07/2011.**

Government is pleased to accord approval for transfer of 1.70 MW Wind Power capacity from out of 30.60 MW allotted to M/s. RSR Power Pvt Ltd. at Belgaum Distirct in favour o M/s. Bright Packaging Private Limited as detailed below.

| Village Name | Taluk / District | Land Survey No. | Extent (Acres) | Wind Turbine Generator location No. |
|---|---|---|---|---|
| Naj | Chikkodi / Belgaum | 404/3 & 404/1 | 2 Acres per WTG of capacity 0.85 MW | GNS-25<br>GNS-26 |

1. M/s Bright Packing Private Limited shall execute an agreement with Government within 45 (forty five) days from the date of issue of this Order.
2. Karnataka Power Transmission Corporation Limited to accord power evacuation and grid synchronization approvals.
3. M/s. Bright Packaging Private Limited shall enter into **Wheeling and Banking** with concerned ESCOM and KPTCL / **PPA** is assigned to HESCOM.
4. The Government reserves the right to Cancel/modify this Order.

The terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka
Suresh B. Krishanappanavar
Under Secretary to Government
Energy Department

P.R. 1690

## ಇಂಧನ ಸಚಿವಾಲಯ

**ವಿಷಯ :** ಮೆ:: ಸೌಭಾಗ್ಯಲಕ್ಷ್ಮಿ ಶುಗರ್ಸ್ ಲಿಮಿಟೆಡ್ ಇವರಿಗೆ 18 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/04/ಎಸ್ಎಲ್ಎಸ್ಎಲ್ /2010/1038 ದಿನಾಂಕ: 31-03-2011/01-04-2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಮೆ:: ಸೌಭಾಗ್ಯಲಕ್ಷ್ಮಿ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ, ಗೋಕಾಕ್ ತಾಲ್ಲೂಕಿನ, ಹಿರೇನಂದಿ ಗ್ರಾಮದಲ್ಲಿ 18 ಮೆ.ವ್ಯಾ (gross) ಮತ್ತು 16.56 ಮೆ.ವ್ಯಾ (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 202 ಎನ್ಸಿಇ 2011, ಬೆಂಗಳೂರು, ದಿನಾಂಕ: 02/07/2011.**

ಮೆ:: ಸೌಭಾಗ್ಯಲಕ್ಷ್ಮಿ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹಿರೇನಂದಿ ಗ್ರಾಮದಲ್ಲಿ 18 ಮೆ.ವ್ಯಾ (gross) ಮತ್ತು 16.56 ಮೆ.ವ್ಯಾ (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
3. The company shall obtain necessary statutory clearance wherever required from the respective Departments / Organizations such as Forest Department, Revenue Department & Karnataka State Pollution Control Board, etc. for both the Sugar Mill and the Power plant.
4. The Detailed Project Report (D.P.R) for the power plant shall be got approved by Karnataka Renewable Energy Development Limited, before the commencement of the power plant.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಸುರೇಶ್.ಬಿ.ಕೃಷ್ಣಪ್ಪನವರ್
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

P.R. 1691

## ಇಂಧನ ಸಚಿವಾಲಯ

**ವಿಷಯ :** ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ಕಂಪನಿಯ 16 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನಾ ಘಟಕವನ್ನು 34 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 405 ಎನ್ಸಿಇ 2010, ದಿನಾಂಕ: 28/10/2010.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕನಿರ್ದೇಶಕರಪತ್ರಸಂಖ್ಯೆ: ಕೆಆರ್ಇಡಿ/04/ಎಸ್ಎಸ್ಎಲ್/2009/1748, ದಿನಾಂಕ: 20/06/2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುನ್ನಾಳ್ ಪಿಜಿ ಗ್ರಾಮದಲ್ಲಿ **16.00** ಮೆಗಾ ವ್ಯಾಟ್ (gross) ಮತ್ತು **8.00** ಮೆಗಾ ವ್ಯಾಟ್ (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನೆ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ಇವರ ಸಹ ವಿದ್ಯುತ್ ಸಾಮರ್ಥ್ಯವನ್ನು **34.00** ಮೆ.ವ್ಯಾ (gross) ಮತ್ತು **22.00** ಮೆ.ವ್ಯಾ (exportable) ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಆದೇಶ ಹೊರಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 272 ಎನ್‌ಸಿಇ 2011, ಬೆಂಗಳೂರು, ದಿನಾಂಕ: 01/07/2001**

ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುನ್ಯಾಳ್ ಪಿಜಿ ಗ್ರಾಮದಲ್ಲಿ **16.00** ಮೆಗಾ ವ್ಯಾಟ್ (gross) ಮತ್ತು **8.00** ಮೆಗಾ ವ್ಯಾಟ್ (exportable) ಸಹ ವಿದ್ಯುತ್ ಯೋಜನೆಗಾಗಿ ನೀಡಿರುವ ನಿರಾಕ್ಷೇಪಣೆಯನ್ನು **34.00** ಮೆಗಾ ವ್ಯಾಟ್ (gross) ಮತ್ತು **22.00** ಮೆಗಾ ವ್ಯಾಟ್ (exportable) ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ನಿರಾಕ್ಷೇಪಣೆಯನ್ನು ನೀಡಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ,

ಮೇಲೆ ಓದಲಾದ (1)ರ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಸುರೇಶ್. ಬಿ. ಕೃಷ್ಣಪ್ಪನವರ್
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್: 1692

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಎಸ್.ಆರ್. ಚೌಡಯ್ಯ, ನಿವೃತ್ತ ಆಡಳಿತ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್. ನಗರ ಇವರ ನಿವೃತ್ತ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಆಕುಕ 48 ಎಂಎಸ್‌ಎ 1999, ದಿನಾಂಕ: 21/05/1999.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 48 ಎಂಎಸ್‌ಎ 1999, ದಿನಾಂಕ: 23/10/1999.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 48 ಎಂಎಸ್‌ಎ 1999, ದಿನಾಂಕ: 27/4/1999.
4. ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ: ಕಂಪ್ಲೆಂಟ್/ಉಪಲೋಕ್/ಮೈಸೂರು–40/2000–01/ಡಿಆರ್‌ಇ2, ದಿನಾಂಕ: 05/08/2002.
5. ಸರ್ಕಾರದ ಆದೇಶ ಸಂಖ್ಯೆ: ಆಕುಕ 48 ಎಂಎಸ್‌ಎ 1999, ದಿನಾಂಕ: 17/12/2002.
6. ಪ್ರಿನ್ಸಿಪಲ್ ಸೆಷನ್ಸ್ ವಿಶೇಷ ನ್ಯಾಯಾಲಯ, ಮೈಸೂರು ವಿಶೇಷ ಪ್ರಕರಣ ಸಂಖ್ಯೆ: 53/2002 ತೀರ್ಪು ದಿನಾಂಕ: 11/01/2010.
7. ಉಚ್ಚ ನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂಖ್ಯೆ: 165/2010 ಮಧ್ಯಂತರ ಆದೇಶ ದಿನಾಂಕ: 17/02/2010.
8. ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–12/ಸಿರ್–3/1999/ಮೈಸೂರು, ದಿನಾಂಕ: 01/04/2010.
9. ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 09 ಸೇಇವಿ 95 ದಿನಾಂಕ: 26/06/1996.
10. 2ನೇ ಕಾರಣ ಕೇಳುವ ಸೂಚನಾ ಪತ್ರ ದಿನಾಂಕ: 12/10/2010.
11. ಸರ್ಕಾರದ ಪತ್ರ ದಿನಾಂಕ: 15/04/2011.
12. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 18 ಸಿಎನ್‌ಎಸ್ 11 ಪಿಎಸ್‌ಸಿ ದಿನಾಂಕ: 01/06/2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಡಾ: ಎಸ್.ಆರ್. ಚೌಡಯ್ಯ, ಆಡಳಿತ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್. ನಗರ, ಮೈಸೂರು ಇವರು ವಿಷ ಸೇವನೆಯಿಂದ ಆಸ್ಪತ್ರೆಗೆ ಬಂದ ಶ್ರೀ ಲಕ್ಕಯ್ಯ ಹಾಗೂ ಅವರ ಹೆಂಡತಿ ಶ್ರೀಮತಿ ರಾಚಮ್ಮನವರಿಗೆ ಚಿಕಿತ್ಸೆ ನೀಡಲು ರೂ. 500ಗಳ ಅಕ್ರಮ ಸಂಭಾವನೆಯನ್ನು ಪಡೆಯುತ್ತಿದ್ದಾ ಲೋಕಾಯುಕ್ತರು ಬೀಸಿದ ಜಾಲದಲ್ಲಿ ಸಿಲುಕಿದ್ದುದರ ಹಿನ್ನೆಲೆಯಲ್ಲಿ ಸದರಿಯವರನ್ನು ಇಲಾಖಾ ವಿಚಾರಣೆ/ಕ್ರಿಮಿನಲ್ ವಿಚಾರಣೆ/ಕ್ರಿಮಿನಲ್ ಮೊಕದ್ದಮೆಯನ್ನು ಕಾಯ್ದಿರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶದಲ್ಲಿ ಸದರಿ ವೈದ್ಯಾಧಿಕಾರಿಯವರು ಲಂಚ ಪಡೆಯುತ್ತಿದ್ದಾ ಲೋಕಾಯುಕ್ತರ ಬಲೆಗೆ ಸಿಲುಕಿರುವ ಹಿನ್ನೆಲೆಯಲ್ಲಿ ಸದರಿಯವರನ್ನು ಲಂಚ ಪಡೆಯುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಸಿಲುಕಿರುವ ಹಿನ್ನೆಲೆಯಲ್ಲಿ ಸದರಿಯವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ 7, 13 (1) (ಡಿ) ಜೊತೆಗೆ 13 (2) ರಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ದೃಢಪಟ್ಟಿದ್ದರಿಂದ ಸದರಿ ಕಾಯ್ದೆಯ ಕಲಂ 19 (1) (ಬಿ) ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ಸರ್ಕಾರದ ಅಧಿಸೂಚನೆಯಲ್ಲಿ ಡಾ: ಎಸ್.ಆರ್. ಚೌಡಯ್ಯ, ಆಡಳಿತ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್. ನಗರ, ಮೈಸೂರು ಇವರ ಅಮಾನತ್ತಿನ ಆದೇಶವನ್ನು ತೆರವುಗೊಳಿಸಿ ಇವರ ವಿರುದ್ಧದ ಶಿಸ್ತುಕ್ರಮ / ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಲೇಡಿ ಘೋಷನ್ ಆಸ್ಪತ್ರೆ, ಮಂಗಳೂರು ಇಲ್ಲಿ ಖಾಲಿ ಇರುವ ಹಿರಿಯ ಸ್ತ್ರೀ ರೋಗ ತಜ್ಞರ ಹುದ್ದೆಗೆ ನೇಮಕಾತಿ ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಡಾ: ಎಸ್.ಆರ್. ಚೌಡಯ್ಯ, ಆಡಳಿತ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್. ನಗರ ಇವರು ಲಂಚ ಪ್ರಕರಣದಲ್ಲಿ ಸಿಲುಕಿರುವ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12 (3) ರನುಸಾರ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ ಸದರಿ ವರದಿಯಲ್ಲಿ ಡಾ: ಎಸ್.ಆರ್. ಚೌಡಯ್ಯ ಇವರ

ವಿರುದ್ಧದ ಲಂಚ ಪ್ರಕರಣದಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 14 ಎ ರಡಿಯಲ್ಲಿ ಶಿಸ್ತುಕ್ರಮವನ್ನು ಲೋಕಾಯುಕ್ತರ ಹಂತದಲ್ಲಿ ಜರುಗಿಸಲು ನಮೂದಿಸಿ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12 (4) ರನ್ವಯ ವರದಿಯನ್ನು ಸಲ್ಲಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿನ ಸರ್ಕಾರದ ಆದೇಶದಲ್ಲಿ ಡಾ: ಎಸ್.ಆರ್. ಚೌಡಯ್ಯ, ಆಡಳಿತ ವೈದ್ಯಾಧಿಕಾರಿ ಸಾರ್ವಜನಿಕ ಆಸ್ಪತ್ರೆ, ಕೆ.ಆರ್. ನಗರ ಇವರ ವಿರುದ್ಧದ ಲಂಚ ಸ್ವೀಕರಿಸಿದ ಆರೋಪದ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 14 ಎ ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ಕೈಗೊಂಡು ಸರ್ಕಾರಕ್ಕೆ ವಿಚಾರಣಾ ವರದಿ ಸಲ್ಲಿಸಲು ಮಾನ್ಯ ಲೋಕಾಯುಕ್ತರಿಗೆ ಪ್ರಕರಣವನ್ನು ವಹಿಸಿ ಆದೇಶಿಸಲಾಗಿದೆ.

ಡಾ: ಎಸ್.ಆರ್. ಚೌಡಯ್ಯ ಇವರ ಲಂಚ ಪ್ರಕರಣದ ಆರೋಪಕ್ಕೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತರು ಪ್ರಿನ್ಸಿಪಲ್ ಸೆಷನ್ ವಿಶೇಷ ನ್ಯಾಯಾಲಯ, ಮೈಸೂರು ಇಲ್ಲಿ ಸಲ್ಲಿಸಿದ್ದ ವಿಶೇಷ ಪ್ರಕರಣ ಸಂಖ್ಯೆ: 53/2002 ರಲ್ಲಿ ಪ್ರಕರಣವನ್ನು ವಿಚಾರಣೆಗೆ ಒಳಪಡಿಸಿ ದಿನಾಂಕ: 11/01/2010 ರಲ್ಲಿ ಈ ಕೆಳಕಂಡಂತೆ ತೀರ್ಪನ್ನು ನೀಡಿರುತ್ತದೆ.

Having heard the both the accused counsel and also the Special Public Prosecutor and also taking into consideration of the accused and his family background and he is also retired from the service and also taking into note of the fact that the accused has given the treatment to patients immediately when they were brought to the hospital and it has emerged in the evidence that he has given the treatment to patients, but after giving treatment, he insisted the complaint and to pay the bribe amount and by considering this aspect and he has given the treatment immediately when the patients were brought to the hospital and for the offence punishable under section 7, this court has to impose the sentence not less than 6 months and by considering the facts and circumstances, I am of the view that the accused is punishable with imprisonment for 1 year for the offfence under section 7 of the prevention of corruption act 1988.

With regard to section 13 (2) the minimum sentence is not less than 1 year and having regard to the facts which I narrated above and the maximum punishment may be extended to 7 years and by taking note of the same, I award sentence of imprisonment of 2 years for the offence punishable under section 13 (2) of the prevention of corruption act 1988.

Both the offences are also liable to be sentenced for fine and having taken note of the retirement of the accused, I am of the view that for each offence awarding an amount of Rs. 5000 will meet the ends of justice and in default to pay fine amount, the accused shall undergo imprisonment for a further period of 3 months for each of the offence.

Both the offences shall run concurrently.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರಲ್ಲಿ ಡಾ: ಎಸ್.ಆರ್. ಚೌಡಯ್ಯ ಇವರು ಪ್ರಿನ್ಸಿಪಲ್ ಸೆಷನ್ಸ್ ನ್ಯಾಯಾಲಯ, ಮೈಸೂರು ಇವರ ಪ್ರಕರಣ ಸಂಖ್ಯೆ: 53/2002 ತೀರ್ಪು ದಿನಾಂಕ: 11/01/2010ರ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ: 165/2010 ರಲ್ಲಿ ಪ್ರಕರಣವನ್ನು ಸಲ್ಲಿಸಿದ್ದು, ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 17/02/2010ರಲ್ಲಿ ಈ ಕೆಳಕಂಡಂತೆ ಮಧ್ಯಂತರ ಆದೇಶವನ್ನು ನೀಡಿದೆ.

The Lokayukta standing counsel is directed to take notice call for lower court records. Call on 01-03-2010.

The view of the reasons assigned in Mic.Crl No. 739/2010, the sentence is suspended and bail is granted to the applicant with a condition that he should furnish a bail bond of Rs. 50,000 likesum bond.

ಮೇಲೆ ಓದಲಾದ ಕ್ರಮ ಸಂಖ್ಯೆ (8) ರಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಡಾ: ಎಸ್.ಆರ್. ಚೌಡಯ್ಯ ಇವರ ಲಂಚ ಪ್ರಕರಣದಲ್ಲಿ ವಿಶೇಷ ನ್ಯಾಯಾಲಯ, ಮೈಸೂರು ಇಲ್ಲಿ ವಿಚಾರಣೆ ನಡೆದು ದಿನಾಂಕ: 11/01/2010ರ ತೀರ್ಪಿನಲ್ಲಿ ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ ಆರೋಪಿತರಿಗೆ ಒಂದು ವರ್ಷ ಸಾದಾ ಸೆರೆಯ ಶಿಕ್ಷೆ ಹಾಗೂ ರೂ. 5,000/– ಗಳ ದಂಡ ವಿಧಿಸಿದ್ದು, ದಂಡ ಕಟ್ಟಲು ತಪ್ಪಿದ್ದಲ್ಲಿ ಪುನ: 3 ತಿಂಗಳ ಸಾದಾ ಸೆರೆವಾಸ ಶಿಕ್ಷೆ ಅನುಭವಿಸುವಂತೆಯೂ ಹಾಗೂ ಲಂಚ ನಿರೋಧ ಕಾಯ್ದೆ 1988 ರ ಕಲಂ 13(1) (ಡಿ) ಜೊತೆಗೆ 13 (2) ರಲ್ಲಿನ ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ 2 ವರ್ಷ ಸಾದಾ ಸೆರೆವಾಸ ಶಿಕ್ಷೆ ಮತ್ತು ರೂ. 5,000/– ದಂಡ ವಿಧಿಸಿದ್ದು, ದಂಡ ಕಟ್ಟಲು ತಪ್ಪಿದ್ದಲ್ಲಿ ಪುನ: 3 ತಿಂಗಳ ಸಾದಾ ಸೆರೆವಾಸ ಶಿಕ್ಷೆ ಅನುಭವಿಸುವಂತೆ ಶಿಕ್ಷೆ ವಿಧಿಸಿರುವ ಹಿನ್ನೆಲೆಯಲ್ಲಿ ಮತ್ತು ಆರೋಪಿ ಡಾ: ಎಸ್.ಆರ್. ಚೌಡಯ್ಯ ಇವರು ದಿನಾಂಕ: 31/10/2007 ರಂದು ವಯೋನಿವೃತ್ತಿ ಹೊಂದಿರುವುದರಿಂದ ಸದರಿ ಆರೋಪಿತರ ವಿರುದ್ಧ ಮಾನ್ಯ ನ್ಯಾಯಾಲಯವು ದೋಷ ಸಿದ್ಧಿಯಾಗಿರುವುದರಿಂದ ತೀರ್ಪು ನೀಡಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಾಮಾವಳಿಗಳ ನಿಯಮ 214 (1) (ಎ) ರನ್ವಯ ಸದರಿಯವರಿಗೆ ದೊರೆಯುವಂತಹ ನಿವೃತ್ತಿ ವೇತನ ಮತ್ತು ಇತರೆ ಸೌಲಭ್ಯಗಳನ್ನು ತಡೆಹಿಡಿಯುವಂತೆ ಕೋರಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 09 ಸೇಇವಿ 95 ದಿನಾಂಕ: 26/06/96 ರಲ್ಲಿ ನಾಗೂರ್ ಮೀರ್ ಎಂಬುವವರ ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನ ಪ್ರಕಾರ ಕ್ರಿಮಿನಲ್ ಮೊಕದ್ದಮೆಯಲ್ಲಿ ಆರೋಪ ಸಾಬೀತಾಗಿದ್ದು, ಸಜೆ ವಿಧಿಸಲ್ಪಟ್ಟ ನೌಕರರು ಮೇಲ್ಮಟ್ಟದ ನ್ಯಾಯಾಲಯದಲ್ಲಿ ತಡೆಯಾಜ್ಞೆ ಪಡೆದುಕೊಂಡಿದ್ದರೂ ಸಹ ಸದರಿ ಮೇಲ್ಮನವಿಯಲ್ಲಿನ ಅಂತಿಮ ತೀರ್ಪಿಗೊಳಪಟ್ಟು ಕೆಳಹಂತದ ನ್ಯಾಯಾಲಯವು ವಿಧಿಸಿರುವ ದಂಡನೆಯ ಹಿನ್ನೆಲೆಯಲ್ಲಿ ಅಂತಹ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ರ ಅನ್ವಯ ಸದರಿಯವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಅವಕಾಶವನ್ನು ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (10) ರಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (9) ರಲ್ಲಿನ ಸುತ್ತೋಲೆಯ ಅನುಸಾರ ಡಾ: ಎಸ್.ಆರ್. ಚೌಡಯ್ಯ, ನಿವೃತ್ತ ಆಡಳಿತ ವೈದ್ಯಾಧಿಕಾರಿ ಇವರಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ನಿಮ್ಮ ವಿರುದ್ಧದ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ನ್ಯಾಯಾಲಯವು ನಿಮ್ಮನ್ನು ದೋಷಿ ಎಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 (1) (ಎ) ರನ್ವಯ ಸೂಕ್ತ ದಂಡನೆಯನ್ನು ವಿಧಿಸುವ ಬಗ್ಗೆ ವಿವರಣೆಯನ್ನು ಕೋರಲಾಗಿತ್ತು. ಆದರೆ ಸರ್ಕಾರವು ನೀಡಿದ 2ನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ಆಪಾದಿತ ನೌಕರರಿಂದ ಯಾವುದೇ ವಿವರಣೆಯನ್ನು ಸರ್ಕಾರದ ಹಂತದಲ್ಲಿ ನಿಗದಿತ ಅವಧಿಯಲ್ಲಿ ಸ್ವೀಕರಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮ ಸಂಖ್ಯೆ (11) ರಲ್ಲಿ ಡಾ: ಎಸ್.ಆರ್. ಚೌಡಯ್ಯ ಇವರಿಗೆ ವಿಶೇಷ ನ್ಯಾಯಾಲಯವು ಸಜಾ ದಂಡನೆಯನ್ನು ವಿಧಿಸಿದ್ದು, ಸದರಿಯವರು ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ: 165/2010 ರಲ್ಲಿ ಮಧ್ಯಂತರ ತೀರ್ಪು ದಿನಾಂಕ: 17/02/2010ರಲ್ಲಿ ಜೈಲು ಶಿಕ್ಷೆಯಿಂದ ಭದ್ರತೆಯ ಆಧಾರದ ಮೇಲೆ ಬಿಡುಗಡೆಗೊಳಿಸಿದ್ದು, ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 09 ಸೇಇವಿ 95 ದಿನಾಂಕ: 26/06/1996ರ ಅನುಸಾರ ಆರೋಪಿತ ವೈದ್ಯಾಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರನ್ವಯ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿರುವುದಕ್ಕೆ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (12)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು, ಡಾ: ಎಸ್.ಆರ್. ಚೌಡಯ್ಯ, ಆಡಳಿತ ವೈದ್ಯಾಧಿಕಾರಿ ಇವರ ವಿರುದ್ಧದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಬಗ್ಗೆ ಪರಿಶೀಲಿಸಿ, ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ.

ಆದುದರಿಂದ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 09 ಸೇಇವಿ 95 ದಿನಾಂಕ: 26/06/96 ರಲ್ಲಿ ನಾಗೂರ್ ಮೀರ್ ಎಂಬುವವರ ಪ್ರಕರಣದಲ್ಲಿ ಮಾನ್ಯ ಸರ್ವೋಚ್ಛ ನ್ಯಾಯಾಲಯವು ನೀಡಿರುವ ತೀರ್ಪಿನ ಪ್ರಕಾರ ಕ್ರಿಮಿನಲ್ ಮೊಕದ್ದಮೆಯಲ್ಲಿ ಆರೋಪ ಸಾಬೀತಾಗಿದ್ದು, ಸಜೆ ವಿಧಿಸಲ್ಪಟ್ಟ ನೌಕರರು ಮೇಲ್ಪಟ್ಟದ ನ್ಯಾಯಾಲಯದಲ್ಲಿ ತಡೆಯಾಜ್ಞೆ ಪಡೆದುಕೊಂಡಿದ್ದರೂ ಸಹ ಸದರಿ ಮೇಲ್ಮನವಿಯಲ್ಲಿನ ಅಂತಿಮ ತೀರ್ಪಿಗೊಳಪಟ್ಟು ಕೆಳಹಂತದ ನ್ಯಾಯಾಲಯವು ವಿಧಿಸಿರುವ ದಂಡನೆಯ ಹಿನ್ನೆಲೆಯಲ್ಲಿ ಅಂತಹ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214ರ ಅನ್ವಯ ಸದರಿಯವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಅವಕಾಶವನ್ನು ಕಲ್ಪಿಸಿರುವುದರಿಂದ ಅದರಂತೆ ಡಾ: ಎಸ್.ಆರ್. ಚೌಡಯ್ಯ ಇವರಿಗೆ ಕರ್ನಾಟಕ ಉಚ್ಛ ನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂಖ್ಯೆ: 165/2010 ರಲ್ಲಿನ ಅಂತಿಮ ತೀರ್ಪಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 (1)ರ ಅನ್ವಯ ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆಕುಕ 48 ಎಂಎಸ್ಎ 1999, ಬೆಂಗಳೂರು, ದಿನಾಂಕ: 05/07/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ: ಎಸ್.ಆರ್. ಚೌಡಯ್ಯ ಇವರಿಗೆ ವಿಶೇಷ ನ್ಯಾಯಾಲಯ, ಮೈಸೂರು ವಿಶೇಷ ಪ್ರಕರಣ ಸಂಖ್ಯೆ: 53/2002, ತೀರ್ಪು ದಿನಾಂಕ: 11/01/2010 ರಲ್ಲಿ ಸಜಾ ದಂಡನೆಯನ್ನು ವಿಧಿಸಿರುವುದರಿಂದ ಕರ್ನಾಟಕ ಉಚ್ಛ ನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂಖ್ಯೆ: 165/2010 ರಲ್ಲಿನ ಅಂತಿಮ ತೀರ್ಪಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 (1) ರ ಅನ್ವಯ ಡಾ: ಎಸ್.ಆರ್. ಚೌಡಯ್ಯ ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ತಡೆಹಿಡಿಯುವ ದಂಡನೆಯನ್ನು ಸರ್ಕಾರವು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಬಿ.ಎಫ್. ಹುಬ್ಬಳ್ಳಿ
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 1693

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಸಿ. ದಶರಥಮೂರ್ತಿ, ಪಿ.ಐ., ಕೇಂದ್ರ ವೃತ್ತ, ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)ಪಿಆರ್/20/2010 (ಓ.ಬಿ. ಸಂಖ್ಯೆ:466/2010), ದಿನಾಂಕ: 28/4/2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 27/ಅಪೀಲು/ಸಿಬ್ಬಂದಿ-2/2010-11 (ಓ.ಬಿ. 157/2010-11) ದಿನಾಂಕ: 09/9/2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23/11/2010
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ/(8)92/2010-11, ದಿನಾಂಕ: 03/3/2011.

**ಪ್ರಸ್ತಾವನೆ :**

ಶ್ರೀ ಎಂ.ಸಿ. ದಶರಥಮೂರ್ತಿ, ಇವರು ದಾವಣಗೆರೆಯ ಕೇಂದ್ರ ವೃತ್ತದಲ್ಲಿ ಪಿ.ಐ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

**"ದಾವಣಗೆರೆ ನಗರದ ಕೇಂದ್ರ ವೃತ್ತ ವ್ಯಾಪ್ತಿಯಲ್ಲಿ ಅವ್ಯಾಹತವಾಗಿ ಅಕ್ರಮವಾಗಿ ಹಣವನ್ನು ಪಣವಾಗಿಟ್ಟು ಆಡುತ್ತಿರುವ ಇಸ್ಪೀಟ್ ಜೂಜಾಟವನ್ನು ತಡೆಗಟ್ಟುವಲ್ಲಿ ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನವನ್ನು ಪ್ರದರ್ಶಿಸಿದ ಆರೋಪಗಳು"**

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 28/4/10ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮೂರು (3) ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06/09/2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 182 ಪೊಸಿಅ 2010 ಬೆಂಗಳೂರು, ದಿನಾಂಕ: 05/07/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಸಿ. ದಶರಥಮೂರ್ತಿ, ಪಿ.ಐ., ಕೇಂದ್ರ ವೃತ್ತ, ದಾವಣಗೆರೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಟಿ.ಎನ್. ರವಿಪ್ರಕಾಶ್
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1694

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎ.ಆರ್. ಕೃಷ್ಣ, ಹೆಚ್.ಸಿ. 3614, ಹಲಸೂರು ಗೇಟ್ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/ಆರ್7/49/ಡಿಸಿಪಿ(ಕೇ)/2009, ದಿನಾಂಕ: 14/08/2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರ ಆದೇಶ ಸಂಖ್ಯೆ: 42/ಅಪೀಲು-1/2009, ದಿನಾಂಕ: 26/3/2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 02/06/2010
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/21/2010-11, ದಿನಾಂಕ: 03/5/2011.

**ಪ್ರಸ್ತಾವನೆ :**

ಶ್ರೀ ಎ.ಆರ್. ಕೃಷ್ಣ, ಇವರು ಬೆಂಗಳೂರಿನ ವೈಯಾಲಿಕಾವಲ್‌ನಲ್ಲಿ ಹೆಚ್.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

ಶ್ರೀ ಎ.ಆರ್. ಕೃಷ್ಣ, ಮುಖ್ಯ ಪೇದೆ, 3614, ವೈಯಾಲಿಕಾವಲ್ ಪೊಲೀಸ್ ಠಾಣೆ ಆದ ನೀವು ಗೈರುಹಾಜರಾಗಿ ನಂತರ ಠಾಣೆಗೆ ಬಂದು ಎಂ.ಹೆಚ್.ಎಸ್. ಪುಸ್ತಕ ಪಡೆದುಕೊಂಡು ಹೋಗಿ ರಜೆ ಮಂಜೂರು ಮಾಡಿಸಿಕೊಳ್ಳುವ ಹವ್ಯಾಸ ಬೆಳೆಸಿಕೊಂಡಿರುತ್ತೀರಿ ಹಾಗೂ ನೀವು ದಿ: 29/03/09 ರಂದು ಠಾಣೆಯ ರಾತ್ರಿ ಹಾಜರಾತಿ ಸಮಯದ ನಂತರ ರಾತ್ರಿ 8.35 ಗಂಟೆಯ ಸಮಯದಲ್ಲಿ ಸಾದಾ ಉಡುಪಿನಲ್ಲಿ ಪಿ.ಐ. ವೈಯಾಲಿಕಾವಲ್ ರವರ ಮುಂದೆ ಹಾಜರಾಗಿ ತೋಳನ್ನು ಮೇಲೇರಿಸಿಕೊಂಡು ಅವಾಚ್ಯ ಶಬ್ದಗಳಿಂದ ಪಿ.ಐ. ರವರನ್ನು ಬೈಯುತ್ತಾ ನನಗೆ ಸಂಬಳವನ್ನು ತಡೆಹಿಡಿಸಿದ್ದೀಯಾ, ಲೇಟಾಗಿ ಬಂದಿದ್ದಕ್ಕೆ ಮೆಮೋ ಕೊಡುತ್ತೀಯಾ, ಕೊಳಕು ಸಮವಸ್ತ್ರವನ್ನು ಹಾಕಿಕೊಂಡು ಬಂದಿದ್ದನಾ, ಸರ್ಕಾರ ಕೊಟ್ಟಿರೋ ಡ್ರೆಸ್ಸನ್ನು ಹಾಕಿಕೊಂಡು ಬಂದಿದ್ದೇನೆ, ನೀವು ಏನು ಮೆಮೋ ಕೊಡುತ್ತೀಯಾ ಕೊಡು ನಿನಗೆ, ನಾನು ಯಾರು ಎಂದು ತೋರಿಸುತ್ತೇನೆ ಎಂದು ಬಾಯಿಗೆ ಬಂದ ಹಾಗೆ ಏಕವಚನದಲ್ಲಿ ಮಾತನಾಡಿರುತ್ತೀರಿ. ಅಲ್ಲದೆ ಪಿ.ಎಸ್.ಐ. ಶ್ರೀ ಸಿದ್ದೇಗೌಡ, ಪಿ.ಸಿ. 9402 ಹಾಗೂ ಇತರ ಪೊಲೀಸ್ ಸಿಬ್ಬಂದಿಯವರ ಮುಂದೆ ಬೇಕಂತಲೇ ಉದ್ದೇಶಪೂರ್ವಕವಾಗಿ ನಾನು ಈ ದಿನ ಕರ್ತವ್ಯಕ್ಕೆ ಬರುವುದಿಲ್ಲ ಅದು ಏನು ಮಾಡುಕೋತಿಯೋ ಮಾಡಿಕೋ ಎಂದು ನಾನು ಕೂಡ ನೋಡಿಕೊಳ್ಳುತ್ತೇನೆ ಅಂತ ಏಕವಚನದಲ್ಲಿ ಹೇಳಿರುತ್ತೀರಿ. ಆಗ ಪಿ.ಐ. ರವರು ನೀವು ರಜೆ ಅರ್ಜಿಯನ್ನು ಕೊಟ್ಟರೇ ಕಳುಹಿಸುತ್ತೇನೆ ರಜೆ ಮಂಜೂರು ಆದರೆ ನಿನ್ನ ಸಂಬಳ ನಿನಗೆ ಸಿಗುತ್ತದೆ ಎಂದು ಹೇಳಿದಾಗ ನೀವು ನೀನು ಏನು ಎಂದು ನನಗೆ ಗೊತ್ತಿದೆ, ನಾನು ಏನು ಅಂತ ಒಂದು ಕೈ ತೋರಿಸುತ್ತೇನೆ ಎಂದು ಹೇಳಿ ಛೇಂಬರ್‌ನಿಂದ ಹೊರಗೆ ಹೋಗುವಾಗ ಅವಾಚ್ಯ ಶಬ್ದಗಳಿಂದ ಬೈದಿರುತ್ತೀರಿ. ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು ಮೇಲಾಧಿಕಾರಿಗಳಿಗೆ ಏಕವಚನದಲ್ಲಿ ಅವಾಚ್ಯ ಶಬ್ದಗಳಿಂದ ಬೈದು ಅಗೌರವ ತೋರಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗ, ಬೆಂಗಳೂರು. ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 14/08/09ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ 6 ತಿಂಗಳ ಕಾಲ ಮುಂದೂಡಲಾಗಿದೆ, ದಿನಾಂಕ: 09/05/09 ರಿಂದ 23/06/09ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೋಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 26/3/2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಅದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 92 ಪೊಸಿಅ 2010 ಬೆಂಗಳೂರು, ದಿನಾಂಕ: 05/07/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಆರ್. ಕೃಷ್ಣ. ಹೆಚ್.ಸಿ. 3614, ಹಲಸೂರು ಗೇಟ್ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಟಿ.ಎನ್. ರವಿಪ್ರಕಾಶ್
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1695

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ರಾಜ್ಯದಲ್ಲಿ 63 ಶೀಘ್ರಗತಿ ನ್ಯಾಯಾಲಯಗಳಿಗೆ ವಿಶೇಷ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಲಾ 360 ಎಲ್ಎಎಂ 2000, ದಿನಾಂಕ: 29/05/2001.
2. ಸರ್ಕಾರಿ ಆದೇಶ ಸಂಖ್ಯೆ: ಲಾ 11 ಎಲ್ಸಿಇ 2003, ದಿನಾಂಕ: 20/03/2003.
3. ಸರ್ಕಾರಿ ಆದೇಶ ಸಂಖ್ಯೆ: ಲಾ 11 ಎಲ್ಸಿಇ 2003, ದಿನಾಂಕ: 31/10/2003.
4. ಸರ್ಕಾರಿ ಆದೇಶ ಸಂಖ್ಯೆ: ಲಾ 11 ಎಲ್ಸಿಇ 2003, ದಿನಾಂಕ: 20/03/2004.
5. ಸರ್ಕಾರಿ ಆದೇಶ ಸಂಖ್ಯೆ: ಹೆಚ್ಡಿ 32 ಪಿಪಿಇ 2004, ದಿನಾಂಕ: 25/01/2005.
6. ಸರ್ಕಾರಿ ಆದೇಶ ಸಂಖ್ಯೆ: ಆಇ 464 ವೆಚ್ಚ–10/2010, ದಿನಾಂಕ: 26/11/2010.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ಹನ್ನೊಂದನೆಯ ಆರ್ಥಿಕ ಆಯೋಗದಲ್ಲಿನ ಶಿಫಾರಸ್ಸಿನಂತೆ ರಾಜ್ಯದ ನ್ಯಾಯಾಲಯಗಳಲ್ಲಿ ಪ್ರಕರಣಗಳನ್ನು ಶೀಘ್ರವಾಗಿ ವಿಲೇವಾರಿ ಮಾಡುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹದಿಮೂರು ಶೀಘ್ರಗತಿ ನ್ಯಾಯಾಲಯಗಳನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 23 ಶೀಘ್ರಗತಿ ನ್ಯಾಯಾಲಯಗಳನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿ 33 ಶೀಘ್ರಗತಿ ನ್ಯಾಯಾಲಯಗಳನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ತದನಂತರ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಟ್ಟು 93 ಹುದ್ದೆಗಳು. ಇವುಗಳ ಪೈಕಿ ಕ್ರಿಮಿನಲ್ ಪ್ರಕರಣಗಳನ್ನು ನಿರ್ವಹಿಸಲು 30 ಶೀಘ್ರಗತಿ ನ್ಯಾಯಾಲಯಗಳು ಒಳಾಡಳಿತ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುತ್ತವೆ. ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಳಾಡಳಿತ ಇಲಾಖೆಯಿಂದ 30 ವಿಶೇಷ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಸೃಜಿಸಲಾಗಿದೆ. ಕಾನೂನು ಇಲಾಖೆಯ ವ್ಯಾಪ್ತಿಯಲ್ಲಿ 63 ವಿಶೇಷ ಸರ್ಕಾರಿ ಅಭಿಯೋಜಕರ ಹುದ್ದೆಗಳು ಇದುವರೆಗೂ ತಾತ್ಕಾಲಿಕ ಹುದ್ದೆಗಳಾಗಿ ರಿಟೇನರ್ ಫೀ ಆಧಾರದ ಮೇಲೆ ಕಾರ್ಯನಿರ್ವಹಣೆ ಮಾಡುತ್ತಿದ್ದಾರೆ. ಆದರೆ, ಸದರಿ ಹುದ್ದೆಗಳನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು, 1977ರ ನಿಯಮ 26(2)ರ ಅಡಿಯಲ್ಲಿ ನೇಮಕ ಮಾಡಿ ಎರಡು ವರ್ಷ, ಮೂರು ವರ್ಷ ಮತ್ತು ಆರು ವರ್ಷಗಳು ಮೀರದಂತೆ ಮುಂದುವರೆಸಿಕೊಂಡು ಬರಲಾಗುತ್ತಿದೆ.

2. ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶದಂತೆ ತಾತ್ಕಾಲಿಕವಾಗಿ ಸೃಜಿಸಲಾದ 63 ಶೀಘ್ರ ಗತಿ ನ್ಯಾಯಾಲಯಗಳ, 63 ವಿಶೇಷ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಒಳಾಡಳಿತ ಇಲಾಖೆಗೆ ವರ್ಗಾಯಿಸಲು, ಆರ್ಥಿಕ ಇಲಾಖೆಯು ಸಹಮತ ನೀಡಿದಂತೆ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

ಆದುದರಿಂದ, ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 233 ಎಲ್ಸಿಇ 2009, ಬೆಂಗಳೂರು, ದಿನಾಂಕ: 04/07/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಕಾನೂನು ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ 63 ಶೀಘ್ರಗತಿ ನ್ಯಾಯಾಲಯಗಳ 63 ವಿಶೇಷ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಈ ಆದೇಶದ ದಿನಾಂಕದಿಂದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅಧೀನದಿಂದ ಒಳಾಡಳಿತ ಇಲಾಖೆಯ ಅಧೀನಕ್ಕೆ, ವರ್ಗಾಯಿಸಿ ಸರ್ಕಾರ ಆದೇಶ ನೀಡಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 103 ವೆಚ್ಚ 10/2011 ದಿನಾಂಕ: 19/04/2011ರ ಸಹಮತಿಯೊಂದಿಗೆ ಹೊರಡಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಸಯ್ಯದ್ ಅಬ್ದುಲ್ ನಜೀರ್
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 1696

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ.ಟಿ. ರಂಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮಧುಗಿರಿ ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂ:ಲಾ 56 ಪಿಪಿಇ 99, ದಿನಾಂಕ: 12.01.2000.
2) ಸರ್ಕಾರದ ಅಧಿಸೂಚನೆ ಸಂ:ಒಇ 578 ಪಿಪಿಇ 2005, ದಿನಾಂಕ: 17.04.2006.
3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿ.ಪಿ.ಎಸ್/ಸಿಶಾ:1(ಎ)/10/2010-11, ದಿನಾಂಕ: 08.12.2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ಕ್ರ.ಸಂ: 7 ರನ್ವಯ ಶ್ರೀ ಜಿ.ಟಿ. ರಂಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮಧುಗಿರಿ ಇವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 24.01.2000ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಶ್ರೀ ಜಿ.ಟಿ. ರಂಗಪ್ಪ ಇವರ ಪರಿವೀಕ್ಷಣಾವಧಿಯನ್ನು ದಿನಾಂಕ: 24.01.2002ರಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 18.12.2010ರ ಪತ್ರದಲ್ಲಿ, ಮಹಾಲೇಖಪಾಲರಿಂದ ಶ್ರೀ ಜಿ.ಟಿ. ರಂಗಪ್ಪ ಇವರ ಸೇವಾ ವಿವರಗಳನ್ನು ಪಡೆಯಲಾಗಿದ್ದು, ಇವರು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು ದಿನಾಂಕ: 24.01.2000ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿದ್ದು, ದಿನಾಂಕ: 23.01.2010ಕ್ಕೆ 10 ವರ್ಷಗಳ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಪೂರೈಸಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಪರಿವೀಕ್ಷಣಾವಧಿಯನ್ನು ಘೋಷಿಸಿರುವುದರಿಂದ, ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ ಅಥವಾ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ, ಅನಧಿಕೃತ ಗೈರು ಹಾಜರಾಗಿರುವುದಿಲ್ಲ ಹಾಗೂ ಅಮಾನತ್ತಿನಲ್ಲಿ ಇಟ್ಟಿರುವುದಿಲ್ಲ. ಈ ಹಿಂದೆ ಬಡ್ತಿಯನ್ನು ನೀಡಿರುವುದಿಲ್ಲ ಅಥವಾ ಸದರಿ ಅಧಿಕಾರಿಯು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಅಥವಾ ಹೂಡುವ ಸಂಭವವಿರುವುದಿಲ್ಲ ಹಾಗೂ ಯಾವುದೇ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುವುದಿಲ್ಲ. ದಿನಾಂಕ: 24.01.2010ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. ಹೀಗಾಗಿ ಸದರಿಯವರು ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿಗೆ ಸರ್ಕಾರದ ಅಧಿಕೃತ ಜ್ಞಾಪನ ಸಂ:ಎಫ್‌ಡಿ 1 ಎಸ್‌ಆರ್‌ಪಿ 85, ದಿನಾಂಕ: 22.01.85ರಲ್ಲಿ ವಿಧಿಸಿರುವ ನಿಬಂಧನೆಗಳನ್ನು ಪೂರೈಸಿದ್ದು, ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿಗೆ ಅರ್ಹರಿರುತ್ತಾರೆ. ಆದ್ದರಿಂದ, ಶ್ರೀ ಜಿ.ಟಿ. ರಂಗಪ್ಪ ಇವರಿಗೆ ದಿನಾಂಕ 24.01.2010 ರಿಂದ ಜಾರಿಗೆ ಬರುವಂತೆ ₹12000-22650ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವಂತೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಒಇ 420 ಪಿಪಿಇ 2010, ಬೆಂಗಳೂರು, ದಿನಾಂಕ: 8ನೇ-ಜುಲೈ-2011**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಜಿ.ಟಿ. ರಂಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮಧುಗಿರಿ ಇವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ 10 ವರ್ಷಗಳ ನಿರಂತರ ಸೇವೆಯನ್ನು ಸಲ್ಲಿಸಿರುವುದರಿಂದ ದಿನಾಂಕ: 24.01.2010 ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳು, 1983 ಹಾಗೂ ಸರ್ಕಾರದ ಅಧಿಸೂಚನೆ ಸಂ:ಎಫ್‌ಡಿ 17 ಎಸ್‌ಆರ್‌ಪಿ 2007, ದಿನಾಂಕ: 16.05.2007 ರನ್ವಯ ರೂ. 11400-21600ರ ವೇತನ ಶ್ರೇಣಿಯಿಂದ ಆಯ್ಕೆ ಕಾಲಿಕ ವೇತನ ಶ್ರೇಣಿಯಾದ ರೂ. 12000-22650 ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
ಪೊಲೀಸ್ ಸೇವೆಗಳು 'ಬಿ'

ಪಿ.ಆರ್. 1739

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕರು ಕೇಂದ್ರ ಅಧಿನಿಯಮಗಳ ಪಾರಿಭಾಷಿಕ ಪದಗಳಿಗೆ ಮತ್ತು ಭಾಷಾಂತರಕ್ಕೆ ಅನುಮೋದನೆ ಪಡೆಯುವ ಸಲುವಾಗಿ ನವದೆಹಲಿಯಲ್ಲಿ ನಡೆಯಲ್ಲಿರುವ working Groupನ ಸಭೆಯಲ್ಲಿ ಭಾಗವಹಿಸಿರುವ ಬಗ್ಗೆ ಘಟನೋತ್ತರ ಅನುಮತಿ ನೀಡುವ ಕುರಿತು.

**ಓದಲಾಗಿದೆ :** 1. ಭಾರತ ಸರ್ಕಾರದ ಪತ್ರ ಸಂಖ್ಯೆ: F.No.4(IV)W.G(RL)/Kannada/2011/Leg-II/86, dt: 03/05/2011.
**2.** ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಪತ್ರ ಸಂಖ್ಯೆ: ಸಂವ್ಯಶಾಇ 18 ಭಾನಿವಿ 2011, ದಿನಾಂಕ: 09/05/2011.
**3** ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 217 ವೆಚ್ಚ-10/2011, ದಿನಾಂಕ: 23/06/2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೇಂದ್ರ ಅಧಿನಿಯಮಗಳ ಕನ್ನಡ ಭಾಷಾಂತರಕ್ಕೆ ಅನುಮೋದನೆ ನೀಡುವ ಸಲುವಾಗಿ ನವದೆಹಲಿಯಲ್ಲಿ ನಡೆಯಲಿರುವ working Group ಸಭೆಗೆ ದಿನಾಂಕ: 12/05/2011ರಿಂದ 20/05/2011ರವರೆಗೆ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರನ್ನು ನಿಯೋಜಿಸುವಂತೆ ಕೋರಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕರನ್ನು ದಿನಾಂಕ: 12/05/2011ರಿಂದ 20/05/2011ರವರೆಗೆ ನವದೆಹಲಿಯಲ್ಲಿ ನಡೆಯಲಿರುವ working Group ಸಭೆಯಲ್ಲಿ ಭಾಗವಹಿಸಲು ಹಾಗೂ ಈ ಬಗ್ಗೆ ನವದೆಹಲಿಗೆ ವಿಮಾನದಲ್ಲಿ ಪ್ರಯಾಣಿಸಲು ಆರ್ಥಿಕ ಇಲಾಖೆಯ ಘಟನೋತ್ತರ ಸಹಮತಿಯನ್ನು ಕಾಯ್ದಿರಿಸಿ, ಅನುಮತಿ ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಿಗೆ ನವದೆಹಲಿಗೆ ವಿಮಾನದಲ್ಲಿ ಪ್ರಯಾಣ ಮಾಡಿದ್ದಕ್ಕಾಗಿ ಘಟನೋತ್ತರ ಸಹಮತಿ ನೀಡಿದೆ, ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 18 ಭಾನಿವಿ 2011, ಬೆಂಗಳೂರು, ದಿನಾಂಕ: 04/07/2011.**

ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರು ನವದೆಹಲಿಯಲ್ಲಿ ದಿನಾಂಕ: 12/05/2011 ರಿಂದ 20/05/2011ರವರೆಗೆ Ministry of Law Justice, Legislative Department ವತಿಯಿಂದ ಏರ್ಪಡಿಸಲಾದ working Group ಸಭೆಯಲ್ಲಿ ಭಾಗವಹಿಸಿದ್ದಕ್ಕಾಗಿ ಹಾಗೂ ಈ ಬಗ್ಗೆ ವಿಮಾನದ ಮೂಲಕ ಪ್ರಯಾಣಿಸಿದ್ದಕ್ಕಾಗಿ ಘಟನೋತ್ತರ ಅನುಮತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 217 ವೆಚ್ಚ 10:2011, ದಿನಾಂಕ: 23/06/2011ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಜಿ.ಕೆ. ಬೋರೇಗೌಡ
ಸರ್ಕಾರದ ಕಾರ್ಯದರ್ಶಿ
ಪಿ.ಆರ್. 1698 ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ 32ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಮೂಅಇ 27 ರಾರಾಹೆ 08 ದಿನಾಂಕ:22–9–2009
2) ದಿನಾಂಕ 8–2–2010 ಸಂಖ್ಯೆ ಮೂಅಇ 27 ರಾರಾಹೆ 2008ರ ಸರ್ಕಾರಿ ಆದೇಶ.
3) ದಿನಾಂಕ 18–05–2010 ಸಂಖ್ಯೆ ಮೂಅಇ 27 ರಾರಾಹೆ 2008ರ ಸರ್ಕಾರಿ ಆದೇಶ
4) ದಿನಾಂಕ 20–7–2010 ಸಂಖ್ಯೆ ಮೂಅಇ 27 ರಾರಾಹೆ 2008ರ ಸರ್ಕಾರಿ ಆದೇಶ.
5) ದಿನಾಂಕ 05–3–2011 ಸಂಖ್ಯೆ ಮೂಅಇ 27 ರಾರಾಹೆ 2008ರ ಸರ್ಕಾರಿ ಆದೇಶ
6) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ) ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರ ದಿನಾಂಕ 18–04–2011ರ ಪತ್ರ ಸಂಖ್ಯೆ ಸಿಬಿಎಸ್ ಹಭಪ:34:ರೈಲ್ವೇ 5465: ವಿವಿಶಿ:2011–12.

**ಪ್ರಸ್ತಾವನೆ :**

ಭದ್ರಾವತಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ. ಸಂ. 32ರ ಬದಲಿಗೆ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಾಣದ ಕಾಮಗಾರಿಯನ್ನು ರೂ.12.00 ಕೋಟಿಗಳ ಪರಿಷ್ಕೃತ ಅಂದಾಜಿನಲ್ಲಿ ಲೋಕೋಪಯೋಗಿ ಇಲಾಖೆಯಿಂದ ಕೈಗೆತ್ತಿಕೊಳ್ಳಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

2. ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ 32 ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಯ ಯುಟಿಲಿಟಿ ಸ್ಥಳಾಂತರಕ್ಕೆ ರೂ.2.00 ಕೋಟಿಯನ್ನು (ರೂಪಾಯಿ ಎರಡು ಕೋಟಿಗಳು ಮಾತ್ರ) ಮೇಲೆ ಓದಲಾದ (2)ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

3. ವಿದ್ಯುತ್ ಕಂಬಗಳ ಹಾಗೂ ಇತರೆ ಯುಟಿಲಿಟಿ ಸ್ಥಳಾಂತರಗಳ ಬಿಲ್ಲಿನ ಮೊತ್ತವನ್ನು ನಿಗದಿತ ಅವಧಿಯಲ್ಲಿ ಸಲ್ಲಿಸದೇ ಇರುವುದರಿಂದ ಮೇಲ್ಕಂಡ ಕಾಮಗಾರಿಗೆ ಬಿಡುಗಡೆ ಮಾಡಲಾದ ಮೊತ್ತವನ್ನು ದಿನಾಂಕ 31–03–2010ರೊಳಗಾಗಿ ರೂ. 4,950/–ಗಳನ್ನು ಡ್ರಾ ಮಾಡಲಾಗಿದ್ದು, ಉಳಿಕೆ ಮೊತ್ತವು ಲ್ಯಾಪ್ಸ್ ಆಗಿದೆ ಎಂದು ತಿಳಿಸಿದ್ದರ ಹಿನ್ನೆಲೆಯಲ್ಲಿ ಮೇಲೆ ಓದಲಾದ (2) ರಿಂದ (4)ರ ಸರ್ಕಾರಿ ಆದೇಶಗಳಲ್ಲಿ ಒಟ್ಟಾರೆಯಾಗಿ ಈ ಯೋಜನೆ ರೂ.5.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿತ್ತು ಆದರೆ ಸದರಿ ಮೊತ್ತದಲ್ಲಿ ರೂ.200.00 ಲಕ್ಷಗಳು ಲ್ಯಾಪ್ಸ್ ಆಗಿರುತ್ತದೆ. ಆದುದರಿಂದ ಸದರಿ ಆದೇಶಗಳಲ್ಲಿ ಬಿಡುಗಡೆ ಮಾಡಿರುವ ರೂ.5.00 ಕೋಟಿಗಳಲ್ಲಿ ಲ್ಯಾಪ್ಸ್ ಆಗಿರುವ ಮೊತ್ತವನ್ನು ಹೊರತುಪಡಿಸಿ ರೂ.3.00 ಕೋಟಿಗಳನ್ನು ಮಾತ್ರ ಕಾಮಗಾರಿಯ ವೆಚ್ಚಕ್ಕೆ ಭರಿಸಲಾಗಿದೆ.

4. ಸದರಿ ಕಾಮಗಾರಿಗೆ ಲ್ಯಾಪ್ಸ್ ಆಗಿರುವ ಮೊತ್ತವನ್ನು ಹೊರತುಪಡಿಸಿ ರೂ.4.00 ಕೋಟಿಯನ್ನು ಖರ್ಚು ಮಾಡಿರುವುದರಿಂದ ಹಾಗೂ ಸದರಿ ಕಾಮಗಾರಿಯು ಪ್ರಗತಿಯಲ್ಲಿರುವುದರಿಂದ ಕಾಮಗಾರಿಗೆ ಮೊತ್ತವನ್ನು ಪಾವತಿಸಲು ರಾಜ್ಯ ಸರ್ಕಾರದ ಪಾಲಿನ ಮೊತ್ತ ರೂ. 230–00 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (6)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಕೋರಿರುತ್ತಾರೆ.

5. ಈ ಅಂಶಗಳೆಲ್ಲವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 27 ರಾರಾಹೆ 2008, ಬೆಂಗಳೂರು, ದಿನಾಂಕ:06ನೇ ಜೂನ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ 32ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ರೂ.230–00 ಲಕ್ಷಗಳನ್ನು (ರೂಪಾಯಿ ಎರಡು ಕೋಟಿ ಮೂವತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಿದೆ. ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465–01–190–3–04–(ಯೋಜನೆ–

211–ಕೆ–ರೈಡ್/ಆರ್‌ಓಬಿ/ಆರ್‌ಯುಬಿ/ಬಂಡವಾಳ" ಇದರಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ.21.49 ಕೋಟಿಗಳಿಂದ ಭರಿಸತಕ್ಕದ್ದು.

2. ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಶೇಷ ವಿಭಾಗ, ಶಿವಮೊಗ್ಗ ಇವರು ಸಾದಿಲ್ವಾರು ಬಿಲ್ಲಿನ ಮೂಲಕ ಮೊಬಲಗನ್ನು ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

ಪಿ.ಆರ್.1699

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ವಿವಿಧ ಇಲಾಖೆ/ಸ್ವಾಯತ್ತ ಸಂಸ್ಥೆಗಳಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳು/ತಜ್ಞರುಗಳು/ಹಿರಿಯ ತಜ್ಞರುಗಳ ಸೇವೆಯನ್ನು ಹಿಂಪಡೆದು ಹೊರಡಿಸಿದ್ದ ಆದೇಶಗಳನ್ನು ರದ್ದುಪಡಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 131 ಎಂಎಸ್‌ಎಸ್ 2007, ದಿ:24–11–2009.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 131 ಎಂಎಸ್‌ಎಸ್ 2007, ದಿ:20–07–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ವಿವಿಧ ಸ್ವಾಯತ್ತ ಸಂಸ್ಥೆಗಳಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಒಟ್ಟು 197 ವೈದ್ಯಾಧಿಕಾರಿಗಳು/ತಜ್ಞರುಗಳು/ಹಿರಿಯ ತಜ್ಞರುಗಳನ್ನು ಆಯಾ ಇಲಾಖೆ/ಸಂಸ್ಥೆಗಳಿಂದ ಮಾತೃ ಇಲಾಖೆಯಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಹಿಂಪಡೆದು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಸರ್ಕಾರದ ಅಧಿಸೂಚನೆಯ ರೀತ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸೇವೆಗೆ ಸೇರಿದ ವೈದ್ಯಾಧಿಕಾರಿಗಳು/ತಜ್ಞರು/ಹಿರಿಯ ತಜ್ಞರುಗಳು, ಶಿವಮೊಗ್ಗ, ಹಾಸನ, ಮಂಡ್ಯ, ಬೀದರ್, ರಾಯಚೂರು, ಬೆಳಗಾಂ, ವೈದ್ಯಕೀಯ ಮಹಾ ವಿದ್ಯಾಲಯಗಳ ಆಸ್ಪತ್ರೆಗಳಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಒಟ್ಟು 42 ವೈದ್ಯಾಧಿಕಾರಿಗಳ ಸೇವೆಯನ್ನು ಮಾತೃ ಇಲಾಖೆಗೆ ಹಿಂಪಡೆದು ಆದೇಶಿಸಲಾಗಿತ್ತು. ಈ ರೀತಿ ವೈದ್ಯಾಧಿಕಾರಿಗಳು/ತಜ್ಞರು/ಹಿರಿಯ ತಜ್ಞರುಗಳ ಸೇವೆಯನ್ನು ಹಿಂಪಡೆಯಲಾಗಿದ್ದ ಮೇಲೆ (1) ಮತ್ತು (2)ರಲ್ಲಿ ಓದಲಾದ ಅಧಿಸೂಚನೆಗಳನ್ನು ಹಿಂಪಡೆಯಲು ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 52 ಎಂಎಸ್‌ಎಸ್ 2011, ಬೆಂಗಳೂರು, ದಿನಾಂಕ:15ನೇ ಜೂನ್ 2011.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 131 ಎಂಎಸ್‌ಎಸ್ 2007 ದಿನಾಂಕ 24–11–2009 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಆಕುಕ 131 ಎಂಎಸ್‌ಎಸ್ 2007, ದಿನಾಂಕ 20–7–2010ರಲ್ಲಿ ವಿವಿಧ ಇಲಾಖೆ ಮತ್ತು ಸ್ವಾಯತ್ತ ಸಂಸ್ಥೆಗಳಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿ/ತಜ್ಞರು/ಹಿರಿಯ ತಜ್ಞರ ಸೇವೆಯನ್ನು ಮಾತೃ ಇಲಾಖೆಯಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಹಿಂಪಡೆಯಲು ಹೊರಡಿಸಲಾದ ಆದೇಶಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರ ಹಿಂಪಡೆದು ಆದೇಶಿಸಿದೆ. ವಿವಿಧ ಸ್ವಾಯತ್ತ ಸಂಸ್ಥೆಗಳು/ಇತರೆ ಇಲಾಖೆಗಳಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸಿ ಉಲ್ಲೇಖ 1 ಮತ್ತು 2 ಗಳ ಅನ್ವಯ ಈಗಾಗಲೇ ಮಾತೃ ಇಲಾಖೆಗೆ ಹಿಂದಿರುಗಿ ಕಾರ್ಯವರದಿ ಮಾಡಿಕೊಂಡಿರುವ ವೈದ್ಯಾಧಿಕಾರಿಗಳು/ತಜ್ಞರು/ಹಿರಿಯ ತಜ್ಞರಿಗೆ ಈ ಆದೇಶ ಅನ್ವಯಿಸುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಫ್.ಹುಬ್ಬಳ್ಳಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.1700

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದ ಎಲ್ಲಾ ಸರ್ಕಾರಿ ಮತ್ತು ಖಾಸಗಿ ಆಸ್ಪತ್ರೆಗಳಲ್ಲಿ/ವೈದ್ಯಕೀಯ ಕಾಲೇಜುಗಳಲ್ಲಿ ಔಷಧಿಗಳಿಗೆ ಸಂಬಂಧಿಸಿದಂತೆ ಹಾಲಿ ನಡೆಸಲಾಗುತ್ತಿರುವ ಕ್ಲಿನಿಕಲ್ ಸಂಶೋಧನಾ ಪ್ರಯೋಗಗಳ ಬಗ್ಗೆ ಸೂಕ್ತ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ತಜ್ಞರ ಸಮಿತಿಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರಿ ಮತ್ತು ಖಾಸಗಿ ಆಸ್ಪತ್ರೆಗಳಲ್ಲಿ/ವೈದ್ಯಕೀಯ ಕಾಲೇಜುಗಳಲ್ಲಿ ಔಷಧಿಗಳಿಗೆ ಸಂಬಂಧಿಸಿದಂತೆ ಹಾಲಿ ನಡೆಸಲಾಗುತ್ತಿರುವ ಕ್ಲಿನಿಕಲ್ ಸಂಶೋಧನಾ ಪ್ರಯೋಗಗಳ ಬಗ್ಗೆ ಸೂಕ್ತ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ತಜ್ಞರನ್ನೊಳಗೊಂಡ ಸಮಿತಿಯನ್ನು ರಚಿಸುವ ಅವಶ್ಯಕತೆ ಇದೆಯೆಂದು ಸರ್ಕಾರವು ಮನಗಂಡಿರುತ್ತದೆ. ಅದರಂತೆಯೇ, ಕೆಳಕಂಡ ಇಬ್ಬರು ತಜ್ಞರನ್ನೊಳಗೊಂಡ ಸಮಿತಿಯನ್ನು ರಚಿಸಲು ತೀರ್ಮಾನಿಸಿ, ಸರ್ಕಾರವು ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 182 ಎಂಎಸ್ಎಫ್ 2011, ಬೆಂಗಳೂರು, ದಿನಾಂಕ:25ನೇ ಮೇ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರಿ ಮತ್ತು ಖಾಸಗಿ ಆಸ್ಪತ್ರೆಗಳಲ್ಲಿ/ವೈದ್ಯಕೀಯ ಕಾಲೇಜುಗಳಲ್ಲಿ ಔಷಧಿಗಳಿಗೆ ಸಂಬಂಧಿಸಿದಂತೆ ಹಾಲಿ ನಡೆಸಲಾಗುತ್ತಿರುವ ಕ್ಲಿನಿಕಲ್ ಸಂಶೋಧನಾ ಪ್ರಯೋಗಗಳ ಹಿನ್ನೆಲೆಯಲ್ಲಿ ಇರುವ ವ್ಯವಸ್ಥೆಯಲ್ಲಿ ತರಬಹುದಾದ ಸುಧಾರಣೆಗಳ ಬಗ್ಗೆ ಸೂಕ್ತ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ಕೆಳಕಂಡ ಇಬ್ಬರು ತಜ್ಞರನ್ನೊಳಗೊಂಡ ಸಮಿತಿಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ರಚಿಸಿ ಆದೇಶಿಸಿದೆ.

1. ಡಾ:ಎ.ಎಸ್. ಅರವಿಂದ, ಎಂ.ಡಿ., ಎಫ್ಆರ್‌ಸಿಪಿ
ಚೀಫ್ ಆಪರೇಟಿಂಗ್ ಆಫೀಸರ್,
ಕ್ಲಿನಿಜಿನ್ ಇಂಟರ್‌ನ್ಯಾಷನಲ್ ಲಿಮಿಟೆಡ್, ಟವರ್-1, ಸೆಮಿಕಾನ್ ಪಾರ್ಕ್
ಎಲೆಕ್ಟ್ರಾನಿಕ್ ಸಿಟಿ, 2ನೇ ಹಂತ, ಹೊಸೂರು ರಸ್ತೆ, ಬೆಂಗಳೂರು-560100
2. ಡಾ: ಮಹಾಬಲೇಶ್ವರ ಮಯ್ಯ,
ನಿವೃತ್ತ ಫಿಜಿಷಿಯನ್ ಅಂಡ್ ಕಾರ್ಡಿಯಾಲಜಿಸ್ಟ್
ಹಾಗೂ ಪ್ರಾಧ್ಯಾಪಕರು (ಮೆಡಿಸಿನ್ ವಿಭಾಗ),
ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು.
ಪ್ರಸ್ತುತ ವಿಳಾಸ: ಮಯ್ಯ ಮಲ್ಟಿಸ್ಪೆಷಾಲಿಟಿ ಹಾಸ್ಪಿಟಲ್, ಅಶೋಕ ಪಿಲ್ಲರ್ ಹತ್ತಿರ,
ಜಯನಗರ 1ನೇ ಬ್ಲಾಕ್, ಬೆಂಗಳೂರು.

ಸಮಿತಿಯ ಸದಸ್ಯರ ಅವಧಿಯು 3 ತಿಂಗಳಾಗಿದ್ದು ಅಷ್ಟರೊಳಗೆ ವರದಿ ನೀಡಲು ಸೂಚಿಸಿದೆ. ಮುಂದುವರೆದು, ಸದರಿ ಸದಸ್ಯರಿಗೆ ಪಾವತಿಸಬೇಕಾದ ಸಂಭಾವನೆ ಬಗ್ಗೆ ಹಾಗೂ ಇತರೆ ಷರತ್ತು ಮತ್ತು ನಿಬಂಧನೆಗಳ ಬಗ್ಗೆ ನಿಯಮಾನುಸಾರ ಪ್ರತ್ಯೇಕ ಆದೇಶವನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ.ಸಾಯಿಬಾಬಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ)

ಪಿ.ಆರ್.1701

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿನ ಪ್ರಧಾನ ಕಾರ್ಯದರ್ಶಿ, ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 206 ಸ.ಆ.ಸೇ. 2009, ದಿನಾಂಕ:18-4-2009
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಅ.ಸು) ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ/30/ಪ್ರಕಾ/ಆಸು 1/2011 ದಿನಾಂಕ:2-6-2011.

**ಪ್ರಸ್ತಾವನೆ :**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯೊಂದಿಗೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಾತ್ಕಾಲಿಕವಾಗಿ ವರ್ಷದಿಂದ ವರ್ಷಕ್ಕೆ ಮುಂದುವರೆಸುತ್ತಾ ಬಂದಿದ್ದು, ಈ ಹುದ್ದೆಗಳನ್ನು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 18-4-2009 ರ ಸರ್ಕಾರದ ಆದೇಶದಲ್ಲಿ ದಿನಾಂಕ 01-04-2009 ರಿಂದ 31-03-2010 ರವರೆಗೆ ಮುಂದುವರೆಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹಾಗೂ ಪೂರಕ ಹುದ್ದೆಗಳು ಅವಶ್ಯಕವಿದ್ದು ಈ ಕೆಳಕಂಡ ಹುದ್ದೆಗಳನ್ನು 1-4-2010 ರಿಂದ 31-3-2012 ರವರೆಗೆ ಮುಂದುವರಿಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್-2/ಪತ್ರಾಂಕಿತ ಆಪ್ತ ಸಹಾಯಕರು) | 1 |
| 2. | ಶೀಘ್ರಲಿಪಿಗಾರ / ಹಿರಿಯ ಶೀಘ್ರಲಿಪಿಗಾರರು/ ಪತ್ರಾಂಕಿತ ಆಪ್ತ ಸಹಾಯಕರು | 2 |
| 3. | ಭಾಷಾಂತರಕಾರರು (ಶಾಖಾಧಿಕಾರಿ/ಹಿರಿಯ ಸಹಾಯಕ) | 1 |
| 4 | ಸಹಾಯಕರು / (ಹಿರಿಯ ಸಹಾಯಕ, ಸಹಾಯಕ) | 1 |
| 5 | ವಾಹನ ಚಾಲಕರು | 1 |
| 6 | ದಲಾಯತ್ | 2 |
| | ಒಟ್ಟು | 8 ಹುದ್ದೆಗಳು |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 304 ಸಅಸೇ 2011, ಬೆಂಗಳೂರು, ದಿನಾಂಕ:16ನೇ ಜೂನ್ 2011.**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಆಡಳಿತ ಸುಧಾರಣೆ, ತರಬೇತಿ, ಮತ್ತು ರಾಜಕೀಯ ವಿಶ್ರಾಂತಿ ವೇತನ) ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯೊಂದಿಗೆ ಈ ಕೆಳಕಂಡ ಪೂರಕ ಹುದ್ದೆಗಳನ್ನು ದಿನಾಂಕ 1–4–2010 ರಿಂದ 31–3–2011 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ) | 1 |
| 2. | ಶೀಘ್ರಲಿಪಿಗಾರರು / ಹಿರಿಯ ಶೀಘ್ರಲಿಪಿಗಾರರು/ ಪತ್ರಾಂಕಿತ ಆಪ್ತ ಸಹಾಯಕರು | 2 |
| 3. | ಭಾಷಾಂತಕಾರರು (ಶಾಖಾಧಿಕಾರಿ/ಹಿರಿಯ ಸಹಾಯಕ) | 1 |
| 4 | ಸಹಾಯಕರು / (ಹಿರಿಯ ಸಹಾಯಕ/ಸಹಾಯಕ) | 1 |
| 5 | ವಾಹನ ಚಾಲಕರು | 1 |
| 6 | ದಲಾಯತ್ | 2 |
| | ಒಟ್ಟು | 8 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು–3)

ಪಿ.ಆರ್.1702

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 97 (ಭಾ), ದಿನಾಂಕ:17–4–1998

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 453 ಸಅಸೇ 2009, ದಿನಾಂಕ:6–10–2009.

3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 168 ಸಆಸೇ 2010, ದಿನಾಂಕ:26–3–2010

4) ಕಡತ ಸಂಖ್ಯೆ:ಆಕುಕ 218 ಎಂಎಂಸಿ 2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ 12–3–1998 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ ಹಾಗೂ ಕಾಲಕಾಲಕ್ಕೆ ಮುಂದುವರಿಸಲಾಗಿದೆ.

| | | |
|---|---|---|
| 1 | ಹಿರಿಯ ಸಹಾಯಕ / ಭಾಷಾಂತರಕಾರಿ | 1 |
| 2. | ಶೀಘ್ರಲಿಪಿಗಾರರು | 2 |
| 3. | ಕಿರಿಯ ಸಹಾಯಕರು–1 | 1 |
| 4. | ದಲಾಯತ್ | 2 |
| 5. | ವಾಹನ ಚಾಲಕ | 1 |

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ 1–4–2010 ರಿಂದ 31–3–2011 ರವರೆಗೆ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಕಡತದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ (ವೈದ್ಯಕೀಯ ಶಿಕ್ಷಣ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1–4–2011 ರಿಂದ 31–3–2012 ರವರೆಗೆ ಮುಂದುವರಿಸುವಂತೆ ಕೋರಲಾಗಿದೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 252 ಸಅಸೇ 2011, ಬೆಂಗಳೂರು, ದಿನಾಂಕ:16ನೇ ಜೂನ್ 2011.**

ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆ ಹಾಗೂ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ 1–4–2011 ರಿಂದ 31–3–2012 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಹಿರಿಯ ಸಹಾಯಕ/ಭಾಷಾಂತರಕಾರ | 1 ಹುದ್ದೆ |
| 2. | ಶೀಘ್ರಲಿಪಿಗಾರ | 2 ಹುದ್ದೆಗಳು |
| 3. | ಕಿರಿಯ ಸಹಾಯಕರು | 1 ಹುದ್ದೆ |
| 4 | ದಲಾಯತ್ | 2 ಹುದ್ದೆಗಳು |
| 5 | ವಾಹನ ಚಾಲಕ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್.1703

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ವಿಶೇಷ ಕಾರ್ಯದರ್ಶಿ (ರೈಲ್ವೆ ಯೋಜನೆ) ಒಂದು ಹುದ್ದೆಯನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದಲ್ಲಿ ರೈಲ್ವೆ ಯೋಜನೆಗಳ ಅಭಿವೃದ್ಧಿಗಾಗಿ ಅನುಭವ ಹೊಂದಿರುವ ಐ.ಆರ್.ಎಸ್.ಇ. ಸೇವೆಗೆ ಸೇರಿದ ಮುಖ್ಯ ಇಂಜಿನಿಯರ್‌ಗೆ ತತ್ಸಮಾನವಾದ ಅಧಿಕಾರಿಯ ಸೇವೆ ಅಗತ್ಯವಿದೆಯೆಂದು ಮನಗಂಡು ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ವಿಶೇಷ ಕಾರ್ಯದರ್ಶಿ (ರೈಲ್ವೆ ಯೋಜನೆ) ಒಂದು ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 282 ಸಅಸೇ 2011, ಬೆಂಗಳೂರು, ದಿನಾಂಕ:17ನೇ ಜೂನ್ 2011.**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ವಿಶೇಷ ಕಾರ್ಯದರ್ಶಿ (ರೈಲ್ವೆ ಯೋಜನೆ) ಒಂದು ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 785 : ವೆಚ್ಚ–1:2011, ದಿನಾಂಕ 17–5–2011ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್.1704

## PERSONEL AND ADMINISTRATIVE REFORMS SECRETARIAT

**Sub :** Deputation of IAS Officers for the 5th round of Phase III Mid-career Training Programme-Reg.

**Read :** 1. D.O. letter No.2/3/2011-Trg-IV, dated:15-3-2011 from Director, LBSNAA, Mussoorie
G.O. No. IDD 52 NSW 2007 dated 24.07.2007
2. Government Order of even number dated: 14.06.2011

**GOVERNMENT ORDER No. DPAR 48 SIS 2011, BANGALORE, DATED:18-6-2011**

In partial modification of Government Order of ven no. dated:14-6-2011 read at (2) above, the State Government has made the following incharge arrangements during the 5th round of Phase III Mid-career Training Programme of 2001 and 2002 batches of Karnataka cadre to be held from 20-06-2011 to 12-08-2011 at Lal Bahadur Shastri National Academy for Administration, Mussoorie.

| Sl.No. | Name of the officer and designation Sriyuths | In-charge to be held by |
|---|---|---|
| 2. | Dr. J. Ravishankar, IAS, (KN:01) Director, Karnataka Rural Water Supply and Sanitary Agency and E/o Joint Secretary to Government, RDPR Department, Bangalore. | Sri P.A. Megannanavar, KAS, Director (Rural Infrastructure) Rural Development and Panchayat Raj Department, M.S. Building, Bangalore |

ಒಟ್ಟು 78 ಅಭ್ಯರ್ಥಿಗಳನ್ನು ಪ್ರೊಬೇಷನರಿ ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 78 ಪ್ರೊಬೇಷನರಿ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 78 ಪ್ರೊಬೇಷನರಿ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇ ಲೆ ಓದಲಾದ ಕ್ರಸಂ. (2) ದಿನಾಂಕ : 07-04-2006 ರಲ್ಲಿ ಎಲ್ಲಾ ಪ್ರೊಬೇಷನರಿ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಮೇಲೆ ಓದಲಾದ ಕ್ರಸಂ. (3), ದಿನಾಂಕ : 25-07-2008 ರಲ್ಲಿ, ದಿನಾಂಕ : 04-09-2008 ರಲ್ಲಿ, 30-10-2008ರಲ್ಲಿ, ದಿನಾಂಕ : 12-02-2009 ಮತ್ತು ದಿನಾಂಕ : 22-03-2010 ರಲ್ಲಿ ಕ್ರಮವಾಗಿ ಒಟ್ಟು 55, 10, 02, 01 ಮತ್ತು 01 ಪ್ರೊಬೇಷನರಿ ತಹಶೀಲ್ದಾರರುಗಳು ಇಲಾಖಾ ಪರೀಕ್ಷೆ ಪಾಸಾಗಿದ್ದು ಮತ್ತು ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರಲಿಲ್ಲವಾದ್ದರಿಂದ ಹಾಗೂ ಅವರುಗಳ ಕಾರ್ಯ ನಿರ್ವಹಣಾ ವರದಿಗಳು ಸಮರ್ಪಕವಾಗಿದ್ದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) 1977ರ ನಿಯಮ 5(1) ರನ್ವಯ ಪ್ರೊಬೇಷನ್ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಲಾಗಿತ್ತು.

ಸದರಿ 1999ನೇ ತಂಡದ ಪೈಕಿ ಶ್ರೀ ರಮೇಶ್ ದೇಸಾಯಿ, ತಹಶೀಲ್ದಾರರು ಇವರ ಪ್ರೊಬೇಷನ್ ಅವಧಿಯನ್ನು ಅವರ ಮೇಲಿನ ಲೋಕಾಯುಕ್ತ ಪ್ರಕರಣವು ಬಾಕಿ ಇದ್ದುದರಿಂದ ಅವರ ಪ್ರೊಬೇಷನ್ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಣೆ ಮಾಡಲು ಪರಿಗಣಿಸಲಾಗಲಿಲ್ಲ. ತದನಂತರ ಸರ್ಕಾರವು ಸದರಿಯವರ ಮೇಲಿನ ಲೋಕಾಯುಕ್ತ ಪ್ರಕರಣವನ್ನು ಮುಕ್ತಾಯಗೊಳಿಸಿರುವ ಹಿನ್ನೆಲೆಯಲ್ಲಿ ಅವರು ಪ್ರೊಬೇಷನ್ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ ಪರಿಶೀಲಿಸಲಾಗಿ, ಶ್ರೀಯುತರ ಕಾರ್ಯ ನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾಗಳು ಇಲ್ಲದಿರುವುದನ್ನು ಹಾಗೂ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಪಾಸಾಗಿರುವ ಬಗ್ಗೆ ದೃಢಪಡಿಸಿಕೊಂಡು ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 361 ಎಎಸ್‌ಡಿ 2010, ಬೆಂಗಳೂರು ದಿನಾಂಕ : 15ನೇ ಜೂನ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ರಮೇಶ್ ದೇಸಾಯಿ, ತಹಶೀಲ್ದಾರ್, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಇವರ ಪ್ರೊಬೇಷನ್ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) 1977ರ ನಿಯಮ 4(1) ರನ್ವಯ ದಿನಾಂಕ : 25-01-2006 ರಿಂದ ಈ ತಹಲ್‌ವರೆಗೆ ವಿಸ್ತರಿಸಿ ಮತ್ತು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) 1977ರ ನಿಯಮ 5(1)ರನ್ವಯ ಅವರು ಪ್ರೊಬೇಷನ್ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. ನಂ. 1712

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಹಾಲಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಕುರಿತು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂಖ್ಯೆ : ಪ್ರಾಆಬೆ/ಸಿಬ್ಬಂದಿ/1/ವಿವ/49/09-10, ದಿನಾಂಕ : 08-04-10.
2. ಸರ್ಕಾರದ ಪತ್ರ ಸಂಖ್ಯೆ : ಕಂಇ 27 ಎಡಿಇ 2010, ದಿನಾಂಕ : 21-06-2010.
3. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂಖ್ಯೆ : ಪ್ರಾಆಬೆ/ಸಿಬ್ಬಂದಿ/1/ವಿವ/49/2009-10, ದಿನಾಂಕ : 17-08-2010.
4. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ : ಕಂಇ 27 ಎಡಿಇ 2010, ದಿನಾಂಕ : 19-08-2010.
5. ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಹಾಲಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ : 24-08-2010.
6. ಹಾವೇರಿ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ : ಸಿಬ್ಬಂದಿ(1)/ವಹಿ/126/07-08, ದಿನಾಂಕ : 18-11-2010.

**ಪ್ರಸ್ತಾವನೆ :**

ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಹಾಲಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧ ಶ್ರೀ ಸುರೇಂದ್ರ ಶಿವಪ್ಪ ಜ್ಯೋತಿ, ವಿ.ಎಸ್.ಎಸ್.ಬ್ಯಾಂಕ್ ನಿರ್ದೇಶಕರು, ಕರ್ನಾಟಕ ರಕ್ಷಣಾ ವೇದಿಕೆ ರೈತಪರ ಅಧ್ಯಕ್ಷರು, ಸಮಾಜ ಸೇವಕರು, ಹರನಗರಿ, ತಾಲ್ಲೂಕು-ರಾಣಿಬೆನ್ನೂರು ಇವರು ಸರ್ಕಾರಕ್ಕೆ ನೀಡಿದ ದೂರಿನ ಬಗ್ಗೆ ಪರಿಶೀಲಿಸಿ, ಅರ್ಜಿದಾರರಿಗೆ ಸೂಕ್ತ ಹಿಂಬರಹ ನೀಡುವಂತೆ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರಿಗೆ ಸರ್ಕಾರದ ಪತ್ರ ಸಂಖ್ಯೆ : ಕಂಇ 190 ವಿಕೋವಿ 2008, ದಿನಾಂಕ : 24-06-2009 ರಂದು ನಿರ್ದೇಶಿಸಿದ ಮೇರೆಗೆ ಹಾವೇರಿ ಜಿಲ್ಲಾಧಿಕಾರಿಗಳು ತಮ್ಮ ದಿನಾಂಕ : 14-07-2009 ಹಾಗೂ 16-09-2009ರ ವರದಿಯಲ್ಲಿ ದೂರುದಾರರ ಮೊಬೈಲಿಗೆ ಸಂಪರ್ಕಿಸಿ, ಎಚ್ಚರಿಕೆ ನೀಡುತ್ತಿರುವ ಬಗ್ಗೆ ಸಲ್ಲಿಸಿದ ದೂರಿನ ಬಗ್ಗೆ ಲಿಖಿತ ವಿವರಣೆಯನ್ನು ಸಲ್ಲಿಸಲು ತಹಶೀಲ್ದಾರ್, ರಾಣಿಬೆನ್ನೂರು ಇವರಿಗೆ ಕಾರಣ ಕೇಳುವ ನೋಟೀಸನ್ನು ನೀಡಿದ್ದು, ಸದರಿ ನೋಟೀಸಿಗೆ ತಹಶೀಲ್ದಾರ್ ರವರು ತಮ್ಮ ಲಿಖಿತ ಹೇಳಿಕೆ ಸಲ್ಲಿಸಿ, ದೂರುದಾರರು ಸಾರ್ವಜನಿಕರಿಂದ ಮಧ್ಯವರ್ತಿಯಾಗಿ ಕೆಲಸ ನಿರ್ವಹಿಸುತ್ತಿದ್ದು, ಸಾರ್ವಜನಿಕರಿಂದ ವಿಧವಾ ವೇತನ, ಸಂಧ್ಯಾ ಸುರಕ್ಷಾ ವೃದ್ಧಾಪ್ಯ ವೇತನ, ಅಂಗವಿಕಲ

ವೇತನ ಮುಂತಾದ ಕೆಲಸಗಳನ್ನು ತಾಲ್ಲೂಕು ಕಛೇರಿಯಿಂದ ಮಾಡಿಸಿಕೊಡುತ್ತೇನೆಂದು ವಂಚನೆ ಮಾಡುತ್ತಿದ್ದು, ಈ ಕುರಿತು ಅನೇಕ ಒತ್ತಡ ತರುತ್ತಿದ್ದು, ಅರ್ಜಿಗಳನ್ನು ವಜಾ ಮಾಡಿದಾಗ ಇಲ್ಲಸಲ್ಲದ ಆರೋಪ ಮಾಡಿ ಮೇಲಾಧಿಕಾರಿಗಳಿಗೆ ದೂರು ಸಲ್ಲಿಸಿರುವರೆಂದು, ಹೇಳಿಕೆ ಸಲ್ಲಿಸಿದರನ್ವಯ ದೂರುದಾರರಿಗೆ ಹಿಂಬರಹ ನೀಡಲಾಗಿತ್ತೆಂದು, ಆದರೆ ದೂರುದಾರರು ಮತ್ತೆ ದೂರು ಸಲ್ಲಿಸಿದ್ದರಿಂದ ಈ ಕುರಿತು ಉಪ ವಿಭಾಗಾಧಿಕಾರಿಗಳು, ಹಾವೇರಿ ವಿಚಾರಣೆ ಜರುಗಿಸುವಂತೆ ನೀಡಿದ ನಿರ್ದೇಶನದಂತೆ, ಉಪ ವಿಭಾಗಾಧಿಕಾರಿಗಳು, ಹಾವೇರಿ ಉಪ ವಿಭಾಗ ಇವರು ವಿಚಾರಣೆಯನ್ನು ನಿಗದಿಪಡಿಸಿದ ದಿನಾಂಕದಂದು ವಿಚಾರಣೆಗೆ ಹಾಜರಾಗಿಲ್ಲವೆಂದು ಮತ್ತು ಸದರಿಯವರು ಹಾಲಿ ಕಛೇರಿ ಸಹಾಯಕರು, ಬೆಂಗಳೂರು ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಸರ್ಕಾರವು ತಹಶೀಲ್ದಾರ್ ನೇಮಕಾತಿ ಪ್ರಾಧಿಕಾರಿಯಾಗಿರುವುದರಿಂದ ಇವರ ಮೇಲೆ ಇಲಾಖಾ ವಿಚಾರಣೆಗೆ ಆದೇಶ ಹೊರಡಿಸಲು ಸರ್ಕಾರದ ಮಟ್ಟದಲ್ಲಿ ಕ್ರಮ ಜರುಗಿಸಲು ಪ್ರಸ್ತಾವನೆಯನ್ನು ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ : 08-04-2010ರ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ : 21-06-2010ರ ಪತ್ರದಲ್ಲಿ ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು ಇವರ ವಿರುದ್ಧದ ಇಲಾಖಾ ವಿಚಾರಣೆ ಜರುಗಿಸಲು ಅನುವಾಗುವಂತೆ ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4 ವರೆಗೆ ತಯಾರಿಸಿ ದೃಢೀಕೃತ ದಾಖಲೆಗಳೊಂದಿಗೆ ಕೂಡಲೇ ಸರ್ಕಾರಕ್ಕೆ ಕಳುಹಿಸುವಂತೆ ಕೋರಲಾಗಿತ್ತು.

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ರವರು ಮೇಲೆ ಓದಲಾದ ಕ್ರ.ಸಂ. (3) ದಿನಾಂಕ : 17-08-2010ರ ಪತ್ರದಲ್ಲಿ ಶ್ರೀ ಎನ್.ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಹಾಲಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧದ ದೂರಿನ ಕುರಿತಂತೆ ಜಿಲ್ಲಾಧಿಕಾರಿಗಳು, ಹಾವೇರಿ ಇವರು ಸಲ್ಲಿಸಿದ ದೋಷಾರೋಪಣೆ ಪಟ್ಟಿಯನ್ನು ಅನುಬಂಧ-1 ರಿಂದ 4 ವರೆಗೆ ಹಾಗೂ ಮೂಲ ಪ್ರಕರಣದ ದಾಖಲೆಗಳನ್ನು ಲಗತ್ತಿಸಿ ಸರ್ಕಾರಕ್ಕೆ ಮುಂದಿನ ಕ್ರಮಕ್ಕಾಗಿ ಕಳುಹಿಸಿರುತ್ತಾರೆ.

ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಹಾಲಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧದ ದೂರು ಪ್ರಕರಣದ ಕುರಿತಂತೆ ಸದರಿಯವರಿಗೆ ಮೇಲೆ ಓದಲಾದ ಕ್ರ.ಸಂ. (4) ದಿನಾಂಕ : 19-08-2010ರ ಸರ್ಕಾರದ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ, ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ. (ವ.ನಿ. & ಮೇ.) ನಿಯಮ 1957ರ ನಿಯಮ 11ರ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ. ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ : 24-08-2010ರ ಲಿಖಿತ ಹೇಳಿಕೆಯಲ್ಲಿ ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಹಾಲಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ರವರು ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ಸದರಿ ದೋಷಾರೋಪಣಾ ಪಟ್ಟಿಗೆ ಉತ್ತರ ಸಲ್ಲಿಸಿ ಆಪಾದನೆಗಳನ್ನು ಅಲ್ಲಗಳೆದು ಅವರು ವಿಚಾರಣಾ ದಿನಾಂಕದಂದು ಪ್ರವಾಸದಲ್ಲಿ ಇದ್ದುದರಿಂದ ವಿಚಾರಣೆಗೆ ಹಾಜರಾಗಲು ಸಾಧ್ಯವಾಗಲಿಲ್ಲ ಎಂದು ತಿಳಿಸಿ, ನಾನು ಯಾವುದೇ ಕರ್ತವ್ಯ ಲೋಪ ಮಾಡದೇ ಇರುವುದರಿಂದ ನನ್ನನ್ನು ದೋಷಮುಕ್ತರೆಂದು ಪರಿಗಣಿಸುವಂತೆ ಕೋರಿರುತ್ತಾರೆ.

ಆರೋಪಿತ ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಹಾವೇರಿ ಜಿಲ್ಲಾಧಿಕಾರಿಗಳಿಗೆ ಕಳುಹಿಸಿ, ಪ್ರಕರಣದ ಬಗ್ಗೆ ಪರಿಶೀಲಿಸಿ, ಸ್ಪಷ್ಟ ಅಭಿಪ್ರಾಯದೊಂದಿಗೆ ಕೂಡಲೇ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಅದರಂತೆ ಹಾವೇರಿ ಜಿಲ್ಲಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ. (6)ರಲ್ಲಿ ತಮ್ಮ ದಿನಾಂಕ : 18-11-2010ರ ಪತ್ರದಲ್ಲಿ ಆಪಾದಿತ ಅಧಿಕಾರಿಯು ಸಲ್ಲಿಸಿದ ತಮ್ಮ ಲಿಖಿತ ವಿವರಣೆಯಲ್ಲಿ ಹೊರಿಸಲಾದ 2 ಆಪಾದನೆಗಳ ಬಗ್ಗೆ ವಿವರಿಸಿದ್ದು, ಮೇಲ್ನೋಟಕ್ಕೆ ಸೂಕ್ತವಿರುತ್ತದೆ. ಶಿಕಾರಿಪುರ ತಾಲ್ಲೂಕು ಮಾನ್ಯ ಮುಖ್ಯಮಂತ್ರಿಗಳ ಸ್ವಕ್ಷೇತ್ರವಾಗಿದ್ದು, ಅವರು ತಮ್ಮ ಕ್ಷೇತ್ರಕ್ಕೆ ಕಾರ್ಯಕ್ರಮ ಹಾಕಿಕೊಂಡಂತೆ ಪ್ರವಾಸ ಕೈಗೊಳ್ಳುವುದು ಕೆಲವು ಬಾರಿ ಅಸಾಧ್ಯವಾಗುವ, ರದ್ದಾಗುವ ಸಂಭವವಿರುತ್ತದೆ. ಹೀಗಿರುವಾಗ ವಿಚಾರಣೆಗೆ ನೇಮಿಸಿದ ದಿನಾಂಕದಂದು ಹಾಜರಾಗಲು ಸಾಧ್ಯವಾಗದೇ ಇರಬಹುದು. ತಹಶೀಲ್ದಾರರು ಒಬ್ಬ ಕಾರ್ಯ ನಿರ್ವಾಹಕ ತಾಲ್ಲೂಕು ಮಟ್ಟದ ಜನ ಸಂಪರ್ಕ ಅಧಿಕಾರಿಯಾಗಿದ್ದು, ತಾಲ್ಲೂಕಿನಲ್ಲಿ ಪ್ರವಾಸ ಕೈಗೊಳ್ಳುವುದು ಸರ್ವೇ ಸಾಮಾನ್ಯವಾಗಿರುವುದರಿಂದ ಅವರ ಮೇಲೆ ಇಲಾಖಾ ವಿಚಾರಣೆ ಜರುಗಿಸುವಂತಹ ಪ್ರಕರಣವಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಹಾಲಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ರವರ ಹೇಳಿಕೆ ಹಾಗೂ ಹಾವೇರಿ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಲಾಗಿ, ಉಪ ವಿಭಾಗಾಧಿಕಾರಿಗಳು ತಹಶೀಲ್ದಾರರ ಮೇಲಿನ ದೂರಿನ ಬಗ್ಗೆ ಖುದ್ದಾಗಿ ಹಾಜರಾಗುವಂತೆ ನೀಡಿದ ನೋಟೀಸಿಗೆ ತಹಶೀಲ್ದಾರರು ಹಾಜರಾಗದಿರುವ ಬಗ್ಗೆ ಅವರು ಪ್ರವಾಸದಲ್ಲಿರುವುದಾಗಿ ಕಾರಣಗಳನ್ನು ನೀಡಿದ್ದು, ಉಪ ವಿಭಾಗಾಧಿಕಾರಿಗಳ ದಿನಾಂಕ : 05-06-2009ರ ವರದಿಯಲ್ಲಿ ತಿಳಿಸಿರುವುದೇನೆಂದರೆ, ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ತಾಲ್ಲೂಕು ರಾಣಿಬೆನ್ನೂರು, ಇವರಿಗೆ ನೋಟೀಸ್ ನೀಡಿ ದಿನಾಂಕ : 22-05-2009 ರಂದು ಅವರ ಕಛೇರಿಗೆ ಹಾಜರಾಗಿ ಹೇಳಿಕೆ ನೀಡಲು ತಿಳಿಸಲಾಗಿತ್ತು. ಆದರೆ ಸದರಿ ದಿನದಂದು ದೂರು ಸಲ್ಲಿಸಿದ ಶ್ರೀ ಸುರೇಂದ್ರ ಶಿವಪ್ಪ ಜ್ಯೋತಿ, ಸಾ.ಹರನಗಿರಿ ಇವರಿಗೂ ಸಹ ಹೇಳಿಕೆ ನೀಡಲು ಅವಕಾಶ ನೀಡಲಾಗಿತ್ತು. ಅದರಂತೆ ದಿನಾಂಕ : 22-05-2009 ರಂದು ಉಭಯತರು ವಿಚಾರಣೆಗೆ ಹಾಜರಾಗಿದ್ದು, ತಮ್ಮ ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ಹಾಗೂ ತಹಶೀಲ್ದಾರ್ ಎನ್.ಮಹೇಶಬಾಬು ಇವರು ಮೌಖಿಕವಾಗಿ ಮಾನ್ಯ ಮುಖ್ಯ ಮಂತ್ರಿಗಳು, ಶಿಕಾರಿಪುರ ಕ್ಷೇತ್ರದಲ್ಲಿ ಪ್ರವಾಸ ಕೈಗೊಳ್ಳುವ ಕುರಿತು ಮುಂಗಡವಾಗಿ ತಿಳಿಸಿದ್ದರೂ ಮತ್ತು ಮುಖ್ಯವಾಗಿ ಮುಖ್ಯಮಂತ್ರಿಗಳ ಸ್ಥಳೀಯ ಕ್ಷೇತ್ರವಾಗಿದ್ದರಿಂದ ಮಾನ್ಯ ಜಿಲ್ಲಾಧಿಕಾರಿಗಳ ನಿರ್ದೇಶನದ ಮೇರೆಗೆ ಅವರ ಪ್ರವಾಸ ಕಾರ್ಯಕ್ರಮದ ಬಗ್ಗೆ ಶಿಕಾರಿಪುರ ತಾಲ್ಲೂಕಿನ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿ ಮಾನ್ಯ ಮುಖ್ಯಮಂತ್ರಿಗಳ ಕಾರ್ಯಕ್ರಮವನ್ನು ನಿಷ್ಠೆಯಿಂದ ಮಾಡಬೇಕಾಗಿದ್ದದ್ದು ನನ್ನ ಕರ್ತವ್ಯವಾಗಿದ್ದರಿಂದ ಅವರು ಯಾವಾಗ ಬರುತ್ತಾರೆ ಯಾವಾಗ ಅವರ ಕಾರ್ಯಕ್ರಮ ರದ್ದುಗೊಳ್ಳುತ್ತದೆ ಎಂಬುದು ಅನಿಶ್ಚಿತವಾಗಿರುತ್ತದೆ. ಆದ್ದರಿಂದ ಮುಂಗಡ ಪ್ರವಾಸ ಕಾರ್ಯಕ್ರಮದಂತೆ ಕೇಂದ್ರಸ್ಥಾನದಲ್ಲಿ ಇರಬೇಕಾಗಿದ್ದರಿಂದ ದಿನಾಂಕ : 12-01-2009 ರಂದು ವಿಚಾರಣೆಗೆ ಹಾಜರಾಗಲು ಆಗಿರುವುದಿಲ್ಲ ಎಂಬ ಅಂಶವನ್ನು ಮಾನ್ಯ ವಿಚಾರಣಾಧಿಕಾರಿಗಳ ಗಮನಕ್ಕೆ ತಂದಿರುವುದಾಗಿಯೂ, ಅದರಂತೆ ಮುಂದಿನ ವಿಚಾರಣಾ ದಿನಾಂಕವನ್ನು ಕೂಡ ತಿಳಿಸಿ, ಅಂದು ಹಾಜರಾಗಲು ಅನುಮತಿಯನ್ನು

ಕೇಳಿಕೊಂಡಿರುತ್ತಾರೆ. ಆದರೆ ದೂರುದಾರರು ಮಾಹಿತಿ ಹಕ್ಕಿನ ಮೇರೆಗೆ ದಿನಾಂಕ : 12–01–2009 ರಂದು ಮುಖ್ಯ ಮಂತ್ರಿಗಳ ಅಧಿಕೃತ ಪ್ರವಾಸ ಇರಲಿಲ್ಲ ಎಂಬ ಅಂಶವನ್ನು ತಮ್ಮ ಗಮನಕ್ಕೆ ತಂದಿರುತ್ತಾರೆ. ಇದಕ್ಕಾಗಿ ಇವರ ವಿರುದ್ಧದ ವಿಚಾರಣೆ ನಡೆಸಿ ದಂಡನೆ ವಿಧಿಸುವಂತಹ ಪ್ರಕರಣವಾಗಿರುವುದಿಲ್ಲವಾದ್ದರಿಂದ ಅವರ ವಿರುದ್ಧ ಹೂಡಲು ಉದ್ದೇಶಿಸಿರುವ ವಿಚಾರಣೆಯನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯ ಮಾಡಲು ಹಾಗೂ ಸದರಿಯವರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ಎಚ್ಚರಿಕೆ ನೀಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 27 ಎಡಿಇ 2010, ಬೆಂಗಳೂರು ದಿನಾಂಕ : 14ನೇ ಜೂನ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎನ್. ಮಹೇಶಬಾಬು, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಹಾಲಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧ ದೂರು ಪ್ರಕರಣದ ಕುರಿತು ಅವರ ವಿರುದ್ಧದ ವಿಚಾರಣೆಯನ್ನು ಕೈಬಿಟ್ಟು, ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದೆ. ಹಾಗೂ ಸದರಿ ಅಧಿಕಾರಿಯವರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ನೋಡಿಕೊಳ್ಳಲು ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. ನಂ. 1713

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಎಂ.ಕೆ. ಜಮಾದಾರ, ಹಿಂದಿನ ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಇಲಾಖಾ ವಿಚಾರಣೆ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಅನಾಸ 246 ಇಎಫ್‌ಟಿ 2001 ದಿನಾಂಕ: 17–11–2001.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 83 ಬಿಡಿಪಿ 2003 ದಿನಾಂಕ:14–10–2003.
3. ಕೆ.ಎ.ಟಿ ಅರ್ಜಿ ಸಂಖ್ಯೆ: 8563/2003ರ ದಿನಾಂಕ:11–10–2008ರ ತೀರ್ಪು.
4. ಸರ್ಕಾರದ ಪತ್ರ ಸಂಖ್ಯೆ: ಕಂಇ 32 ಬಿಎಸಿ 2004 ದಿನಾಂಕ:2–6–2009.
5. ಉಪ ಲೋಕಾಯುಕ್ತರು, ಕರ್ನಾಟಕ, ಬೆಂಗಳೂರು ರವರ ಪತ್ರ ಸಂಖ್ಯೆ: LOK/ARE-1/Enq-77/2002–03 ದಿನಾಂಕ: 7–12–2009.
6. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 32 ಬಿಎಸಿ 2004 ದಿನಾಂಕ:4–1–2010.
7. ಶ್ರೀ ಎಂ.ಕೆ. ಜಮಾದಾರ, ಹಿಂದಿನ ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಕುಂದಗೋಳ ತಾಲ್ಲೂಕು ಧಾರವಾಡ ಜಿಲ್ಲೆ ಪ್ರಸ್ತುತ ನಿವೃತ್ತ ಇವರು ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ: 24–3–2011.

**ಪ್ರಸ್ತಾವನೆ:**

ಶ್ರೀ ಎಂ.ಕೆ. ಜಮಾದಾರ, ಹಿಂದಿನ ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಪ್ರಸ್ತುತ ನಿವೃತ್ತ ಇವರು ದಿನಾಂಕ 23–1–1998 ರಂದು ಶ್ರೀ ಚನ್ನಪ್ಪ ತಂದೆ ಬಸವಣ್ಣಪ್ಪ ಮೊರಬದ ಕಡೆಹಟ್ಟಿ, ಕುಂದಗೋಳ ತಾಲ್ಲೂಕು ಇವರು ಸೀಮೆಎಣ್ಣೆ ಲೈಸೆನ್ಸ್ ಹೊಂದಿದ್ದು, ಇವರಿಗೆ ಸೀಮೆಎಣ್ಣೆ ವಿತರಿಸಲು ಎತ್ತುವಳಿ ಮಾಡಲು ರೂ. 1,000/– ಗಳನ್ನು ಲಂಚವಾಗಿ ಕೊಡಲು ಕೇಳಿದ್ದರಿಂದ, ಶ್ರೀ ಎಂ.ಕೆ. ಜಮಾದಾರ, ಆಹಾರ ನಿರೀಕ್ಷಕರ ವಿರುದ್ಧ ಲೋಕಾಯುಕ್ತ ಪೊಲೀಸ್, ಧಾರವಾಡ ಇವರಿಗೆ ನೀಡಿರುವ ದೂರುಗಳನ್ನಾಧರಿಸಿ, ಸದರಿ ನೌಕರರನ್ನು ಲಂಚ ನಿರೋಧ ಕಾಯ್ದೆ 1988ರ ಪ್ರಕಾರ ಪ್ರಕರಣವನ್ನು ದಾಖಲಿಸಿಕೊಂಡು ಟ್ರಾಪ್ ಮಾಡಿರುತ್ತಾರೆ. ಟ್ರಾಪ್ ಮಾಡಿದ ವಿವರವಾದ ವರದಿಯನ್ನು ಉಪ ಲೋಕಾಯುಕ್ತರು ಸರ್ಕಾರಕ್ಕೆ ಸಲ್ಲಿಸಿದ್ದರ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ದಿನಾಂಕ: 17–11–2001 ರ ಆದೇಶದಲ್ಲಿ ಶ್ರೀ ಎಂ.ಕೆ ಜಮಾದಾರ, ಹಿಂದಿನ ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957 ರ ನಿಯಮ 14ಎ ಮೇರೆಗೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರು, ಬೆಂಗಳೂರು ರವರಿಗೆ ವಹಿಸಿಕೊಟ್ಟು ಆದೇಶಿಸಲಾಗಿತ್ತು. ಸರ್ಕಾರದ ಆದೇಶದಂತೆ ಮಾನ್ಯ ಲೋಕಾಯುಕ್ತರು ದಿನಾಂಕ: 31–3–2003ರಂದು ಸಲ್ಲಿಸಿದ್ದ ವರದಿಯನ್ನಾಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಸರ್ಕಾರದ ದಿನಾಂಕ: 14–10–2003 ರ ಆದೇಶದಲ್ಲಿ ಶ್ರೀ ಎಂ.ಕೆ. ಜಮಾದಾರ, ಹಿಂದಿನ ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಇವರ ಮೇಲಿನ ಭ್ರಷ್ಟಾಚಾರದ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 8(viii) ರನ್ವಯ ಸದರಿ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿತ್ತು.

ಸರ್ಕಾರದ ದಿನಾಂಕ: 14–10–2003 ರ ಆದೇಶದಿಂದ ಬಾಧಿತರಾದ ಶ್ರೀ ಎಂ.ಕೆ. ಜಮಾದಾರ, ಆಹಾರ ನಿರೀಕ್ಷಕರ ವಿರುದ್ಧ ಲೋಕಾಯುಕ್ತ ಪೊಲೀಸ್, ಧಾರವಾಡ ಇವರು ಮಾನ್ಯ ಕೆ.ಎ.ಟಿಯಲ್ಲಿ ಸರ್ಕಾರದ ಆದೇಶವನ್ನು ವಜಾಗೊಳಿಸುವಂತೆ ಕೋರಿ ಅರ್ಜಿ ಸಂಖ್ಯೆ: 8563/2003ನ್ನು ಸಲ್ಲಿಸಿರುತ್ತಾರೆ. ಸದರಿ ಅರ್ಜಿಯು ವಿಚಾರಣೆಗೆ ಬಂದು ಮೇಲೆ ಓದಲಾದ ಕ್ರಮ ಸಂಖ್ಯೆ: (3) ದಿನಾಂಕ: 11–10–2008ರಂದು ತೀರ್ಪು ನೀಡಿದ್ದು, ಅದರ ಉದ್ಧೃತ ಭಾಗವು ಈ ಕೆಳಕಂಡಂತಿದೆ.

The application is allowed. Order bearing No.ಕಂಇ ೮೩ ಬಿಡಿಪಿ 2003 dated 14-10-2003 (Annexure-A6) and the recommendation of Hon'ble Lokayukta, bearing No. LOK/ARE-1/ENQ-77/2002-03 dated 24-5-2003 (Annexure-A3) are quashed and the Disciplinary

Authority is directed to return the records of Inquiry to the Hon'ble Upalokayukta, who may consider the report of the Inquiry Officer and proceed to take further steps in the matter in the light of the observations made above.

ಪ್ರಕರಣಕ್ಕೆ ಸಂಬಂಧಪಟ್ಟ ಲೋಕಾಯುಕ್ತ ಕಛೇರಿಯ ಮೂಲ ದಾಖಲಾತಿಯೊಂದಿಗೆ ಇರುವ ಕಡತ ಸಂಖ್ಯೆ: ಆನಾಸ 249 ಇಎಫ್‌ಟಿ 2001 ನ್ನು ಗೌ; ಉಪ ಲೋಕಾಯುಕ್ತ ಕಛೇರಿಗೆ ಕಳುಹಿಸಿ, ಮಾನ್ಯ ಕೆ.ಎ.ಟಿ ಆದೇಶದಂತೆ ಸೂಕ್ತ ಕ್ರಮ ಕೈಗೊಂಡು ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಸರ್ಕಾರದ ದಿನಾಂಕ: 2–6–2009ರ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ಮಾನ್ಯ ಉಪ ಲೋಕಾಯುಕ್ತರ ದಿನಾಂಕ: 7–12–2009ರ ಪತ್ರದಲ್ಲಿ, ಶ್ರೀ ಎಂ.ಕೆ. ಜಮಾದಾರ, ಆಹಾರ ನಿರೀಕ್ಷಕರು (ವಜಾಗೊಂಡಿರುವ ನೌಕರರು), ತಹಶೀಲ್ದಾರ್ ಕಛೇರಿ, ಕುಂದಗೋಳ, ಧಾರವಾಡ ಜಿಲ್ಲೆ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಮಾನ್ಯ ಕೆ.ಎ.ಟಿ ಆದೇಶದನ್ವಯ ಮರುಪರಿಶೀಲಿಸಿ, ಸದರಿ ನೌಕರರು ನಿವೃತ್ತಿ ಹೊಂದಿರುವುದರಿಂದ ಅವರ ನಿವೃತ್ತಿ ವೇತನದಲ್ಲಿ ಶೇ. 25% ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸುವಂತೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಮೂಲ ದಾಖಲೆಗಳೊಂದಿಗೆ ವರದಿ ನೀಡಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತರು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ರ ನಿಯಮ 214 (1) (ಎ) ಪ್ರಕಾರ ಶ್ರೀ ಎಂ.ಕೆ ಜಮಾದಾರ, ಆಹಾರ ನಿರೀಕ್ಷಕರು (ವಜಾಗೊಂಡಿರುವ ನೌಕರರು) ಇವರ ನಿವೃತ್ತಿ ವೇತನದಲ್ಲಿ ಶೇ. 25% ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ನಿಮ್ಮ ಹೇಳಿಕೆ ಏನಾದರೂ ಇದ್ದಲ್ಲಿ, ನೋಟೀಸು ತಲುಪಿದ 15 ದಿನಗಳೊಳಗಾಗಿ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಇಲ್ಲದಿದ್ದರೆ ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು ಎಂದು ಮೇಲೆ ಓದಲಾದ ಕ್ರಮ ಸಂಖ್ಯೆ: (6) ರಂತೆ ದಿನಾಂಕ: 4–1–2010 ರಂದು ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಆದರೆ ಸದರಿ ನೋಟೀಸು ಆರೋಪಿತ ನಿವೃತ್ತ ನೌಕರರಿಗೆ ಜಿಲ್ಲಾಧಿಕಾರಿಗಳ ಮುಖಾಂತರ ಜಾರಿಯಾಗದೇ ಅಂತಿಮವಾಗಿ ದಿನಾಂಕ: 16–3–2011 ರಂದು ಜಾರಿ ಆಗಿರುತ್ತದೆ.

ಸರ್ಕಾರದ ದಿನಾಂಕ: 4–1–2010ರ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (7) ರಂತೆ ಆರೋಪಿತ ನೌಕರರು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ಲಿಖಿತ ಹೇಳಿಕೆಯಲ್ಲಿ, ತಮಗೆ ಸರ್ಕಾರದ 2ನೇ ಕಾರಣ ಕೇಳುವ ನೋಟೀಸು ದಿನಾಂಕ: 16–3–2011 ರಂದು ತಲುಪಿದ್ದು, ಅವರು ಈ ಕೆಳಗಿನ ಅಂಶಗಳನ್ನು ಪ್ರತಿಪಾದಿಸಿರುತ್ತಾರೆ.

- ಸರ್ಕಾರಿ ನೌಕರರ ವಿರುದ್ಧ ಎರಡು ಖಟ್ಲೆಗಳು ಒಂದೇ ಸಮಯದಲ್ಲಿ ನಡೆದಿವೆ.

1) ಇಲಾಖಾ ವಿಚಾರಣೆ ಸರ್ಕಾರ ಅಂದರೆ ಲೋಕಾಯುಕ್ತರ ಮುಂದೆ.
2) ಮತ್ತೊಂದು ಜಿಲ್ಲಾ ನ್ಯಾಯಾಧೀಶರ ಮುಂದೆ ಕ್ರಿಮಿನಲ್ ಹೀಗೆ ಎರಡು ಕಡೆ ಸ್ವಾತಂತ್ರ್ಯವಾಗಿ ನಡೆದಿದೆ.

- ಕ್ರಿಮಿನಲ್ ಮೊಕದ್ದಮೆ 3/1999ರ ಪ್ರಕರಣದಲ್ಲಿ ಜಿಲ್ಲಾ ಸೆಷನ್ ನ್ಯಾಯಾಲಯವು ನನ್ನ ಮೇಲೆ ಹೊರಿಸಿದ ಆಪಾದನೆಗಳಿಂದ ದೋಷಮುಕ್ತ ಮಾಡಲಾಗಿದೆ. ಆದರೆ ಕೆ.ಎ.ಟಿ ಆದೇಶದ ಹಿನ್ನೆಲೆಯಲ್ಲಿ ವಿಚಾರಣೆ ನಡೆಸಲಾಗಿದೆ. ಈ ವಿಚಾರಣೆಯಿಂದ ನನಗೆ ತೊಂದರೆಗೆ ಒಳಪಟ್ಟಿದ್ದು, ನಾನು ಒಬ್ಬ ಬಡ 3ನೇ ದರ್ಜೆ ನೌಕರನಾಗಿದ್ದು, 10–13 ವರ್ಷದ ಅವಧಿಯಲ್ಲಿ ಯಾವುದೇ ಉತ್ಪನ್ನ ಇಲ್ಲದೇ ಜೀವನ ಸಾಗಿಸುತ್ತಿರುತ್ತೇನೆ.
- ಮುಂದುವರೆದು ಜಿಲ್ಲಾ ಸೆಷನ್ ನ್ಯಾಯಾಲಯದಲ್ಲಿ ಮತ್ತು ಕೆ.ಎ.ಟಿಯಲ್ಲಿ ನನ್ನ ಪ್ರಕರಣದ ಬಗ್ಗೆ ವಿಚಾರಣೆ ನಡೆದು ಆದೇಶಗಳು ನನ್ನ ಪರವಾಗಿ ಬಂದಿರುವುದರಿಂದ ಯಾವುದೇ ರೀತಿಯಾದ ದಂಡನೆಯನ್ನು ವಿಧಿಸುವುದು ಸಮಂಜಸವಲ್ಲ. ಈ ಹಿನ್ನೆಲೆಯಲ್ಲಿ ನನಗೆ ಬರತಕ್ಕಂತಹ ಪೂರ್ಣ ನಿವೃತ್ತಿ ವೇತನವನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ನೌಕರನೊಬ್ಬನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆಯಡಿಯಲ್ಲಿ ಕ್ರಿಮಿನಲ್ ಮೊಕದ್ದಮೆಯು ದಾಖಲಾಗಿದ್ದಲ್ಲಿ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ನ್ಯಾಯಾಲಯದಲ್ಲಿ ನಡೆಸಲು ಹಾಗೂ ಅದೇ ಆರೋಪದ ಮೇಲೆ ಇಲಾಖಾ ವಿಚಾರಣೆಯನ್ನು ಒಟ್ಟಿಗೆ ನಡೆಸಲು ಕಾನೂನಿನಲ್ಲಿನ ನಿಯಮಗಳಲ್ಲಿ ಯಾವುದೇ ನಿಷೇದ ಇರುವುದಿಲ್ಲ. ಒಂದುವೇಳೆ ಕ್ರಿಮಿನಲ್ ಮೊಕದ್ದಮೆಯಲ್ಲಿ ನ್ಯಾಯಾಲಯವು ಆರೋಪಿತರನ್ನು ಆಪಾದನೆಯಿಂದ ಖುಲಾಸೆ ಮಾಡಿದರೂ ಅದೇ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಲು ಕಾನೂನಿನಲ್ಲಿ ಅವಕಾಶವಿದೆ. ಈ ಹಿನ್ನೆಲೆಯಲ್ಲಿ ಆರೋಪಿತ ನೌಕರರು ಪ್ರತಿಪಾದಿಸಿರುವ ಅಂಶಗಳನ್ನು ಒಪ್ಪಲು ಸಾಧ್ಯವಿಲ್ಲ. ಮುಂದುವರೆದು ಅವರು ಮಾಡಿಕೊಂಡಿರುವ ಇತರೆ ಮನವಿಗಳು ರುಜುವಾತಾದ ಆರೋಪಕ್ಕೂ ಯಾವುದೇ ಸಂಬಂಧ ಇರುವುದಿಲ್ಲ. ಹೀಗಾಗಿ ಆರೋಪಿತರು ಪ್ರತಿಪಾದಿಸಿರುವ ಅಂಶಗಳಲ್ಲಿ ಪರಿಗಣನಾರ್ಹವಾದ ಅಂಶಗಳಾವುವು ಇಲ್ಲ. ಆದುದರಿಂದ ಪ್ರಕರಣದಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (5) ದಿನಾಂಕ: 7–12–2009 ರ ಪತ್ರದಲ್ಲಿ ಸನ್ಮಾನ್ಯ ಉಪ ಲೋಕಾಯುಕ್ತರು ಶಿಫಾರಸ್ಸು ಮಾಡಿರುವ ಶಿಫಾರಸ್ಸನ್ನು ಸರ್ಕಾರವು ಒಪ್ಪಿಕೊಂಡು ರುಜುವಾತಾದ ದುರ್ನಡತೆಗಾಗಿ ಕೆ.ಸಿ.ಎಸ್.ಆರ್ ನಿಯಮ 214(1)(ಎ) ಅಡಿಯಲ್ಲಿ ಆರೋಪಿತ ನೌಕರರ ನಿವೃತ್ತಿ ವೇತನದಲ್ಲಿ ಶೇ. 25% ರಷ್ಟು ನಿವೃತ್ತಿ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 32 ಬಿಎಸಿ 2004 ಬೆಂಗಳೂರು, ದಿನಾಂಕ: 7–6–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಪಾದಿತ ನೌಕರರಾದ ಶ್ರೀ ಎಂ.ಕೆ. ಜಮಾದಾರ, ಹಿಂದಿನ ಆಹಾರ ನಿರೀಕ್ಷಕರು, ತಹಶೀಲ್ದಾರ್ ಕಛೇರಿ, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಪ್ರಸ್ತುತ ನಿವೃತ್ತ ಇವರ ರುಜುವಾತಾದ ಆರೋಪದ ದುರ್ನಡತೆಗಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 214(1)(ಎ) ರಡಿಯಲ್ಲಿ ಅವರ ನಿವೃತ್ತಿ ವೇತನದಲ್ಲಿ ಶೇ. 25% ರಷ್ಟು ನಿವೃತ್ತಿ ವೇತನವನ್ನು ಶಾಶ್ವತವಾಗಿ ತಡೆ ಹಿಡಿಯುವ ದಂಡನೆಯನ್ನು ವಿಧಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿ.ನಿ ಮತ್ತು ಸೇ–2)

ಪಿ.ಆರ್.ನಂ. 1714

## ಕಂದಾಯ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ: ಆರ್‌ಡಿ 15 ಎಲ್.ಜಿ.ಕೆ 2011 ಬೆಂಗಳೂರು, ದಿನಾಂಕ: 13.06.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್.ಡಿ. 15 ಎಲ್.ಜಿ.ಕೆ. 2011 ದಿ: 23.02.2011ರಲ್ಲಿ ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕು, ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗೆ ಸದಸ್ಯರನ್ನಾಗಿ ನೇಮಿಸಲಾಗಿದ್ದ ಶ್ರೀ ಮುರುಗೇಶ್ ಬಿನ್ ಮುನಿಯಪ್ಪ (ಪರಿಶಿಷ್ಟ ಜಾತಿ) ಕರಿಸಂದ್ರ, ಮಾಲೂರು ತಾಲ್ಲೂಕು ಕೋಲಾರ ಜಿಲ್ಲೆ, ಇವರ ನಾಮ ನಿರ್ದೇಶನವನ್ನು ರದ್ದು ಪಡಿಸಿ, ಶ್ರೀ ಅಬ್ಬಯ್ಯಪ್ಪ ಬಿನ್ ಲೇಟ್ ಮುನಿಯಪ್ಪ (ಪರಿಶಿಷ್ಟ ಜಾತಿ) ಬುವನಹಳ್ಳಿ ಗ್ರಾಮ, ನಿದರಮಂಗಲ ಅಂಚೆ, ಕಸಬಾ ಹೋಬಳಿ, ಮಾಲೂರು ತಾಲ್ಲೂಕು, ಇವರನ್ನು ಸಮಿತಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ.ಮಂ 1)

ಪಿ.ಆರ್.ನಂ. 1715

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ 36 ರಲ್ಲಿ 2.00 ಎಕರೆ ಜಮೀನನ್ನು ಶ್ರೀ ಕೃಷ್ಣ ಸೇವಾಶ್ರಮ ಟ್ರಸ್ಟ್ ಇವರಿಗೆ ಆಸ್ಪತ್ರೆ ನಿರ್ಮಾಣಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಅಧ್ಯಕ್ಷರು ಶ್ರೀ ಕೃಷ್ಣ ಸೇವಾಶ್ರಮ ಟ್ರಸ್ಟ್ ಇವರ ಮನವಿ ದಿ: 11.05.2010.
2. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ(ಪೂ)ಸಿಆರ್ 107/2009-10, ದಿನಾಂಕ: 11-09-2010 ಮತ್ತು 25.10.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ 1ರ ದಿ:11-05-2010ರ ಅಧ್ಯಕ್ಷರು, ಶ್ರೀ ಕೃಷ್ಣ ಸೇವಾಶ್ರಮ ಟ್ರಸ್ಟ್ ಇವರು ಸಲ್ಲಿಸಿರುವ ಮನವಿಯಲ್ಲಿ ಸದರಿ ಟ್ರಸ್ಟ್ ವತಿಯಿಂದ 100 ಹಾಸಿಗೆಗಳುಳ್ಳ ಆಧುನಿಕ ಸಾರ್ವಜನಿಕ ಆಸ್ಪತ್ರೆಯನ್ನು ನಿರ್ಮಿಸುವ ಉದ್ದೇಶಕ್ಕಾಗಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ.36 ರಲ್ಲಿ 2.00 ಎಕರೆ ಜಮೀನನ್ನು ಶ್ರೀ ಕೃಷ್ಣ ಸೇವಾಶ್ರಮ ಟ್ರಸ್ಟ್ ರವರಿಗೆ ಮಂಜೂರು ಮಾಡಲು ಕೋರಿರುತ್ತಾರೆ.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: 2ರ ದಿ. 11.09.2010 ಮತ್ತು ದಿ: 25.10.2010ರ ಪತ್ರಗಳಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ.36ರಲ್ಲಿ 9.18 ಎಕರೆ ಜಮೀನಿದ್ದು, ಸರ್ಕಾರಿ ಮುಫತ್ ಕಾವಲ್ ಎಂದು ವರ್ಗೀಕೃತಗೊಂಡಿರುತ್ತದೆ. ಈ ಜಮೀನನ್ನು ಮೆ: ನವಜೀವನ ನಿಲಯ ಇವರಿಗೆ ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 184 ಎಲ್‌ಜಿಬಿ 87, ದಿ:05.07.1991ರಂತೆ ಕುಷ್ಠ ರೋಗಿಗಳ ಪುನರ್ವಸತಿಗಾಗಿ ಹಿಂದಿನ ಗುತ್ತಿಗೆ ಅವಧಿಯಿಂದ ಅಂದರೆ, ದಿ:09-10-1989 ರಿಂದ 30 ವರ್ಷಗಳ ಅವಧಿಗೆ ಎಕರೆಯೊಂದಕ್ಕೆ ರೂ.200/-ರಂತೆ ಗುತ್ತಿಗೆ ದರವನ್ನು ನಿಗದಿ ಪಡಿಸಿ ಮಂಜೂರು ಮಾಡಲಾಗಿರುತ್ತದೆ. ಪ್ರಶ್ನಿತ 9.18 ಎಕರೆ ಜಮೀನಿನ ಪೈಕಿ 2.00 ಎಕರೆ ಜಮೀನನ್ನು ಶ್ರೀ ಕೃಷ್ಣ ಸೇವಾಶ್ರಮ ಟ್ರಸ್ಟ್ ಇವರಿಗೆ ಆಸ್ಪತ್ರೆ ನಿರ್ಮಾಣಕ್ಕೆ ಬಿಟ್ಟುಕೊಡಲು ಮೆ: ನವಜೀವನ ನಿಲಯ ಇವರು ಒಪ್ಪಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಸದರಿ ಜಮೀನಿನ ಮಾರ್ಗಸೂಚಿ ಬೆಲೆ ಎಕರೆಯೊಂದಕ್ಕೆ ರೂ. 1.50 ಕೋಟಿ ಇದ್ದು, ಮಾರುಕಟ್ಟೆ ಬೆಲೆ ಎಕರೆಯೊಂದಕ್ಕೆ ರೂ.3 ಕೋಟಿ ಇರುವುದಾಗಿ ತಿಳಿಸಿರುತ್ತಾರೆ. ಸದರಿ ಜಮೀನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಇರುವುದಾಗಿ ವರದಿ ಮಾಡಿರುತ್ತಾರೆ.

3) ಶ್ರೀ ಕೃಷ್ಣ ಸೇವಾಶ್ರಮ ಟ್ರಸ್ಟ್ ಒಂದು ಧಾರ್ಮಿಕ ದತ್ತಿ ಟ್ರಸ್ಟ್ ಆಗಿದ್ದು, ಈಗಾಗಲೇ ಬೆಂಗಳೂರು ನಗರದ ಜಯನಗರ 5ನೇ ಬ್ಲಾಕಿನಲ್ಲಿ 70 ಹಾಸಿಗೆಯುಳ್ಳ ಆಸ್ಪತ್ರೆಯನ್ನು 1962ರಿಂದ ನಡೆಸುತ್ತಿರುವುದಾಗಿ ತಿಳಿಸಿರುವುದರಿಂದ ಇವರ ಮನವಿಯನ್ನು ಪರಿಗಣಿಸಿ ಸರ್ಕಾರವು ಶ್ರೀ ಕೃಷ್ಣ ಸೇವಾಶ್ರಮ ಟ್ರಸ್ಟ್ ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಅಧಿಕಾರ ಚಲಾಯಿಸಿ ನಿಯಮ 21ನ್ನು ಸಡಿಲಿಸಿ, ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸನಂ.36 ರಲ್ಲಿನ ಜಮೀನನ್ನು ಮೆ: ನವಜೀವನ ನಿಲಯ ಇವರಿಗೆ ಗುತ್ತಿಗೆ ಆಧಾರದ ಮೇಲೆ ಈಗಾಗಲೇ ಮಂಜೂರಾಗಿರುವ 9.18 ಎಕರೆ ಜಮೀನಿನ ಪೈಕಿ 2.00 ಎಕರೆ ಜಮೀನನ್ನು ಕಡಿತಗೊಳಿಸಿ, ಸದರಿ 2.00 ಎಕರೆ ಜಮೀನನ್ನು ಶ್ರೀಕೃಷ್ಣ ಸೇವಾಶ್ರಮ ಟ್ರಸ್ಟ್ ಇವರಿಗೆ 100 ಹಾಸಿಗೆಯುಳ್ಳ ಆಸ್ಪತ್ರೆ ನಿರ್ಮಿಸಲು ಉಚಿತವಾಗಿ ಜಮೀನು ಮಂಜೂರು ಮಾಡಲು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 505 ಎಲ್‌ಜಿಬಿ 2010 ಬೆಂಗಳೂರು, ದಿನಾಂಕ: 08-06-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೇಲೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ ನಿಯಮ 21ನ್ನು ಸಡಿಲಿಸಿ, ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ 36ರಲ್ಲಿ ಎಕರೆ ಜಮೀನನ್ನು ಮೆ: ನವಜೀವನ ನಿಲಯ ಇವರಿಗೆ ಗುತ್ತಿಗೆ ಆಧಾರದ ಮೇಲೆ ಈಗಾಗಲೇ ಮಂಜೂರಾಗಿರುವ 9.18 ಎಕರೆ ಜಮೀನಿನ ಪೈಕಿ

2.00 ಎಕರೆ ಜಮೀನನ್ನು ಕಡಿತಗೊಳಿಸಿ ಸದರಿ 2.00 ಎಕರೆ ಜಮೀನನ್ನು ಶ್ರೀ ಕೃಷ್ಣ ಸೇವಾಶ್ರಮ ಟ್ರಸ್ಟ್ ಇವರಿಗೆ 100 ಹಾಸಿಗೆಯುಳ್ಳ ಆಸ್ಪತ್ರೆ ನಿರ್ಮಿಸಲು ಉಚಿತವಾಗಿ ಜಮೀನು ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 121 ವೆಚ್ಚ–7/2011, ದಿ: 10–03–2011ರಲ್ಲಿ ಸಮಾಲೋಚಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇ. ಈಶ್ವರ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ).

ಪಿ.ಆರ್.ನಂ. 1716

## ಕಂದಾಯ ಸಚಿವಾಲಯ

**ವಿಷಯ** : ಶ್ರೀಮತಿ ಧನಲಕ್ಷ್ಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು, ಹಾಲಿ ತಹಶೀಲ್ದಾರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು ಇವರು ಎಸಗಿದ ಅಕ್ರಮ ದಾಖಲಾತಿಗಳನ್ನು ಸೃಷ್ಟಿಸಿ ಹಾಗೂ ಕಾನೂನು ಬಾಹಿರ ಕೃತ್ಯಗಳ ಬಗ್ಗೆ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆ ಒಳಪಡಿಸುವ ಬಗ್ಗೆ.

**ಓದಲಾಗಿದೆ** :

1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ(ಜಿ)/ಸಿಟಿ/ಕ್ರೈಂ–45/2010, ದಿನಾಂಕ:12–04–2010.
2. ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರ ವಿಭಾಗದ ಮೊ.ಸಂ: 45/10ರ ಪ್ರಥಮ ವರ್ತಮಾನ ವರದಿ ದಿನಾಂಕ: 21–09–2010.
3. ತನಿಖಾಧಿಕಾರಿಗಳ ಅಂತಿಮ ವರದಿ ದಿನಾಂಕ: 07–04–2011, ಶೋಧನಾ ಪಂಚನಾಮೆ ಬರವಣಿಗೆ ಮಹಜರ್, ಅಮಾನತ್ತು ಮಹಜರ್, ಲಾಕರ್ ಮಹಜರ್, ಸಾಕ್ಷಿಗಳ ಹೇಳಿಕೆಗಳು ಇತ್ಯಾದಿ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ:12–04–2011ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಶ್ರೀಮತಿ ಧನಲಕ್ಷ್ಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು ಹಾಲಿ ತಹಶೀಲ್ದಾರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರು ಈ ಹಿಂದೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕಿನ ತಹಶೀಲ್ದಾರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ 1960–61 ರ ಅವಧಿಯಲ್ಲಿ ಆಗಿನ ದೇವನಹಳ್ಳಿ ತಾಲ್ಲೂಕು ತಹಶೀಲ್ದಾರ್‌ರವರು ಪೊಲಿಟಿಕಲ್ ಸಫರರ್ಸ್ ಅಡಿಯಲ್ಲಿ ಒಟ್ಟು 16 ಜನರಿಗೆ ತಲಾ 6.00 ಎಕರೆಯಂತೆ ಅರೆಬಿನ್ನಮಂಗಲ ಗ್ರಾಮದ ಸರ್ವೆ ನಂ.1 ರಲ್ಲಿ ಜಮೀನು ಮಂಜೂರು ಮಾಡಿದ್ದು, ಆ 16 ಜನರ ಪೈಕಿ ಪರಿಹಾರ ಪಡೆದ ಶ್ರೀ ಬಿ.ಎಲ್. ಹನುಮಂತರಾಜು ರವರ ತಂದೆ ಎಂದು ಹೇಳಲಾಗುವ ಶ್ರೀ ಎಲ್.ಎನ್. ಶಿವಣ್ಣ ನವರ ಹೆಸರು ಇರುವುದು ದೃಢೀಕೃತ ದಾಖಲೆಯಲ್ಲಿ ತಿಳಿದುಬರುವುದಿಲ್ಲ. ಪರಿಹಾರ ಪಡೆಯಲಾದ ಕಡತದಲ್ಲಿ ಈ 16 ಜನರ ಪೈಕಿ ಕ್ರಮ ಸಂಖ್ಯೆ:3ರಲ್ಲಿ ಶ್ರೀ ಎಲ್.ಎನ್. ಶಿವಣ್ಣ ಎಂದು ತಿದ್ದಿ ಬರೆದಂತೆ ಕಂಡುಬರುತ್ತದೆ. ( ಕ್ರಮಸಂಖ್ಯೆ:3 ರಲ್ಲಿ ರೇವಣ್ಣ ಸಿದ್ದಯ್ಯ ಎಂದು ದೃಢೀಕೃತ ಪ್ರತಿಯಲ್ಲಿರುತ್ತದೆ.) ಜಿಲ್ಲಾಧಿಕಾರಿಗಳ ಆದೇಶದಂತೆ ತಯಾರಿಸಲಾದ ನಕಾಶೆಯ ಬ್ಲಾಕ್ ನಂ.34ರಲ್ಲಿ ಶ್ರೀಮತಿ ನಾರಾಯಣಮ್ಮ, ಮುನಿಯಮ್ಮ ಎಂಬುವವರು ಸ್ವಾಧೀನದಲ್ಲಿರುತ್ತಾರೆ. ಕಡತದಲ್ಲಿರುವ ನಕಾಶೆಯಲ್ಲಿ ಬ್ಲಾಕ್ ನಂ.34ರಲ್ಲಿ ಶ್ರೀ ಎಲ್.ಎನ್ ಶಿವಣ್ಣ ನವರ ಹೆಸರೂ ಇರುತ್ತದೆ. ಬ್ಲಾಕ್ ನಂ.34 ರಲ್ಲಿ ಮೇಲ್ಕಂಡ ಶ್ರೀಮತಿ ನಾರಾಯಣಮ್ಮ, ಮುನಿಯಮ್ಮ ಸ್ವಾಧೀನದಲ್ಲಿದ್ದರೂ, ಖಾಸಗಿ ವ್ಯಕ್ತಿಯಾದ ಸಂಪತ್ @ ಸಂತೋಷ್ ಈತನು ಸದರಿ ಜಮೀನಿಗೆ ಶ್ರೀ ಬಿ.ಎಲ್. ಹನುಮಂತರಾಜು ರವರೆ ವಾರಸುದಾರರೆಂದು ಬಿಂಬಿಸಿ ಹನುಮಂತರಾಜು ರವರಿಂದ ಅಕ್ರಮ ಸಂಭಾವನೆಯನ್ನು ಪಡೆದುಕೊಳ್ಳುವಂತೆ ಕೆ.ಐ.ಎ.ಡಿ.ಬಿ ಅಧಿಕಾರಿಗಳಿಗೆ ಪ್ರೇರೇಪಿಸಿ ದಿನಾಂಕ: 09.06.2009 ರಂದು ಶ್ರೀ ಬಿ.ಎಲ್ ಹನುಮಂತರಾಜು ಬಿನ್ ಎಲ್.ಎನ್. ಶಿವಣ್ಣ ರವರು ಸ್ವಾಧೀನದಲ್ಲಿರುತ್ತಾರೆಂದು ಮಹಜರ್‌ನ್ನು ತನ್ನ ಅಧೀನ ಅಧಿಕಾರಿಗಳಿಂದ ನಡೆಸುವ ಮೂಲಕ ಶ್ರೀಮತಿ ಧನಲಕ್ಷ್ಮಿ, ತಹಸೀಲ್ದಾರ್ ರವರು ತಮ್ಮ ನೈಜತೆಯ ವರದಿಯಲ್ಲಿ ಶ್ರೀ ಎಲ್.ಎನ್ ಶಿವಣ್ಣರವರ ಮಗನಾದ ಬಿ.ಎಲ್. ಹನುಮಂತರಾಜು ರವರು ಸ್ವಾಧೀನಾನುಭವದಲ್ಲಿರುತ್ತಾರೆಂದು ಹಾಗೂ ಶಿವಣ್ಣ ಮತ್ತು ಹನುಮಂತರಾಜು ರವರಿಗೆ ಯಾವುದೇ ಸಂಬಂಧವಿಲ್ಲದೇ ಇದ್ದರೂ ಕೂಡ ಸರ್ಕಾರದಿಂದ ಕಾನೂನು ಬಾಹಿರವಾಗಿ ಪರಿಹಾರ ಪಡೆಯಲು ಅನುಕೂಲ ಮಾಡಿಕೊಟ್ಟು ಜೆರಾಕ್ಸ್ ಆದೇಶದ ಪ್ರತಿಯನ್ನೆ ನೈಜ ದಾಖಲಾತಿ ಎಂಬಂತೆ ಆದೇಶಿಸಿ ಇತರೆ ಆರೋಪಿತರುಗಳೊಂದಿಗೆ ಸಂಚಿನಲ್ಲಿ ಭಾಗಿಯಾಗಿ ಶ್ರೀ ಐ. ಬಾಲರಾಜು ರವರಿಂದ ಲಂಚದ ಹಣವನ್ನು ಪಡೆದುಕೊಂಡು ಲಂಚ ನಿರೋಧ ಕಾಯ್ದೆ–1988 ರ ಕಲಂ 7, 13(1) (ಡಿ) ಸಹವಾಚನ 13(2) ಹಾಗೂ ಭಾರತೀಯ ದಂಡ ಸಂಹಿತೆಯ ಕಲಂ 471 ಮತ್ತು 120(ಬಿ) ರೀತ್ಯಾ ಆರೋಪಿತರಾದ ಶ್ರೀಮತಿ ಧನಲಕ್ಷ್ಮಿ ರವರ ಮೇಲಿನ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದಿಂದ, ಸದರಿ ಆರೋಪಿತೆಯನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಅರ್ಹರಾಗಿದ್ದು, ಸದರಿಯವರನ್ನು ಅಭಿಯೋಜನೆಗೊಳಪಡಿಸಲು ಸಕ್ಷಮ ಪ್ರಾಧಿಕಾರದ ಅರ್ಥಾತ್ ಸದರಿ ಆರೋಪಿತೆಯನ್ನು ತನ್ನ ಹುದ್ದೆಯಿಂದ ತೆಗೆದು ಹಾಕುವ/ವಜಾ ಮಾಡುವ ಅಧಿಕಾರವುಳ್ಳ ಪ್ರಾಧಿಕಾರವಾದ ಸರ್ಕಾರದ ಪೂರ್ವಾನುಮತಿ ಅತ್ಯಗತ್ಯವಾಗಿರುವುದರಿಂದ ಅಭಿಯೋಜನಾ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಈ ಬಗ್ಗೆ ಅನುಮತಿ ನೀಡುವ ಸಂಬಂಧ ಹೆಚ್ಚುವರಿ ಪೊಲೀಸ್ ನಿರ್ದೇಶಕರು ಒದಗಿಸಿರುವ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಪರಿಹಾರ ಪಾವತಿಸಿರುವ ಮೂಲ ಕಡತಗಳು.
2) ತಹಸೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಕಛೇರಿ ಪತ್ರದ ಸಂಖ್ಯೆ: ಎಲ್.ಎನ್.ಡಿ(ಎನ್.ಎ)ಸಿಆರ್: 696/10–11, ದಿನಾಂಕ: 19.11.2010ರ ಪತ್ರ.
3) ವಿಶೇಷ ಜಿಲ್ಲಾಧಿಕಾರಿಗಳು, ಜಾರಿದಳ, ಅ.ನಿ.ತಾ, ಸೆಲ್ ರವರು ಸರ್ವೆ ನಂ.1 ರ ಒತ್ತುವರಿ ನಕ್ಷೆಯ ದೃಢೀಕೃತ ಪ್ರತಿಯಲ್ಲಿ ಬ್ಲಾಕ್ ನಂ.34 ರಲ್ಲಿ ನಾರಾಯಣಮ್ಮ, ಮುನಿಯಮ್ಮ ರವರ ಹೆಸರಿನ ವಿವರದ ದಾಖಲಾತಿ.

4) ಪೊಲಿಟಿಕಲ್ ಸಫರರ್ಸ್ ರೂಲ್ಸ್ ಮೇರೆಗೆ ಎಲ್.ಎನ್. ಶಿವಣ್ಣ ಇವರಿಗೆ ಜಮೀನು ಮಂಜೂರಾಗಿಲ್ಲದ ಬಗ್ಗೆ ದಾಖಲಾತಿಗಳು.
5) ಅಪರ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರು ದಿನಾಂಕ: 29.12.2010 ರಂದು ತಮ್ಮ ಕಛೇರಿ ಪತ್ರ ಸಂಖ್ಯೆ: ಆರ್.ಆರ್.ಟಿ/ಸಿಆರ್: 171/95-96ರ ರೀತ್ಯಾ ಕಳುಹಿಸಿಕೊಟ್ಟ ಪತ್ರ.
6) ಜಂಟಿ ನಿರ್ದೇಶಕರು (ಸಾಂಖ್ಯಿಕ) ಬಿಬಿಎಂಪಿ, ಪಿಯು ಬಿಲ್ಡಿಂಗ್ ರವರು ಎಲ್.ಎನ್. ಶಿವಣ್ಣ ಬಿನ್ ಸಿದ್ದಪ್ಪ ರವರು ಮರಣ ಹೊಂದಿರುವ ಬಗ್ಗೆ ಮಾಹಿತಿ ಇರುವುದಿಲ್ಲವೆಂಬ ಬಗ್ಗೆ ವರದಿ ನೀಡಿರುತ್ತಾರೆ.
7) ಸರ್ವೆಯರ್ ರವರು ಸ್ಥಳ ಪರಿಶೀಲನೆ ಮಾಡಿ ನೀಡಲಾದ ವರದಿ.
8) ತಹಸೀಲ್ದಾರ್, ಯಲಹಂಕ ಇವರು ನಂ,ಚುನಾ/ಸಿಆರ್: 12/10-11 ರಂತೆ ಬಿ.ಎಲ್. ಹನುಮಂತರಾಜು ರವರು ತಂದೆಯವರ ಹೆಸರು ಚುನಾವಣಾ ಗುರುತಿನ ಚೀಟಿಯಲ್ಲಿನ ವಿವರಗಳು.
9) ವಿಶೇಷ ತಹಸೀಲ್ದಾರ್, ಯಲಹಂಕ ಇವರು ತಮ್ಮ ಪತ್ರ ಸಂಖ್ಯೆ: ಆರ್.ಆರ್.ಟಿ (ಜ) ಸಿಆರ್: 1035/10-11, ದಿನಾಂಕ: 22.2.2011 ರಂತೆ ಕಳುಹಿಸಿಕೊಟ್ಟ ವರದಿ.
10) ಆರೋಪವನ್ನು ರುಜುವಾತು ಪಡಿಸುವ ಸಾಕ್ಷಿದಾರರುಗಳಾದ : (1) ನಾರಾಯಣಮ್ಮ (2) ಮುನಿಯಮ್ಮ (3) ಬಿ.ಸಿ. ಶಿವಪ್ರಕಾಶ್ (4) ವಿ. ವೀರಣ್ಣ (5) ಐ. ಬಾಲರಾಜು (6) ಬಿ. ಎಂ. ನಾರಾಯಣಸ್ವಾಮಿ (7) ಕೆ. ಪ್ರಕಾಶ್ (8) ರಾಜು @ ರಾಜಣ್ಣ (9) ಎಸ್. ಪಿ. ನಾಗೇಶ್‌ಬಾಬು (10) ಕೆ. ಸುನಂದ (11) ಎಂ. ಕೃಷ್ಣಪ್ಪ ಮತ್ತು (12) ಎಸ್.ಎಸ್. ಗೀತಾ ರವರುಗಳ ಹೇಳಿಕೆ.

ಈ ಮೇಲಿನ ದಾಖಲಾತಿಗಳಿಂದ ಶ್ರೀಮತಿ ಧನಲಕ್ಷ್ಮಿ, ತಹಸೀಲ್ದಾರ್ ರವರು ಪ್ರಕರಣದಲ್ಲಿ ಸಕ್ರಿಯವಾಗಿ ಶಾಮೀಲಾಗಿರುವುದು ದಾಖಲೆಗಳಿಂದ ಮೂಡಿಬಂದಿರುವುದರಿಂದ ಇವರ ವಿರುದ್ಧ ಲಂಚ ನಿರೋಧಕಾಯ್ದೆ 1988ರ ಕಲಂ 7, 13(1) (ಡಿ) ಸಹವಾಚನ 13(2)ಭಾರತೀಯ ದಂಡ ಸಂಹಿತೆಯ ಕಲಂ 471, 120(ಬಿ) ರಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಮೇಲ್ನೋಟಕ್ಕೆ ಸ್ಪಷ್ಟವಾದ ಒಂದು ಪ್ರಕರಣವಿರುವುದು ಸರ್ಕಾರಕ್ಕೆ ಮನದಟ್ಟಾಗಿದೆ. ಆದುದರಿಂದ ಕರ್ನಾಟಕ ಲೋಕಾಯುಕ್ತ ಕಛೇರಿಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ವರದಿಯನ್ನು ಸರ್ಕಾರವು ಪರಿಗಣಿಸಿ ಸದರಿ ತಹಸೀಲ್ದಾರ್ ರವರು ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 20 ಎಡಿಇ 2011, ಬೆಂಗಳೂರು, ದಿನಾಂಕ: 20-06-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಪಿತರಾದ ಶ್ರೀಮತಿ ಧನಲಕ್ಷ್ಮಿ, ಹಿಂದಿನ ತಹಸೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು ಹಾಲಿ ತಹಸೀಲ್ದಾರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರು ಈ ಹಿಂದೆ ಬೆಂಗಳೂರು ಉತ್ತರ ತಾಲ್ಲೂಕಿನ ಅಪರ ತಹಸೀಲ್ದಾರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ 1960-61 ರ ಅವಧಿಯಲ್ಲಿ ಆಗಿನ ದೇವನಹಳ್ಳಿ ತಾಲ್ಲೂಕು ತಹಸೀಲ್ದಾರ್ ರವರು ಪೊಲಿಟಿಕಲ್ ಸಪರರ್ಸ್ ಅಡಿಯಲ್ಲಿ ಒಟ್ಟು 16 ಜನರಿಗೆ ತಲಾ 6.00 ಎಕರೆಯಂತೆ ಅರೆಬಿನ್ನಮಂಗಲ ಗ್ರಾಮದ ಸರ್ವೆ ನಂ.1 ರಲ್ಲಿ ಜಮೀನು ಮಂಜೂರು ಮಾಡಿದ್ದು, ಆ 16 ಜನರ ಪೈಕಿ ಪರಿಹಾರ ಪಡೆದ ಶ್ರೀ ಬಿ.ಎಲ್. ಹನುಮಂತರಾಜು ರವರ ತಂದೆ ಎಂದು ಹೇಳಲಾಗುವ ಶ್ರೀ ಎಲ್.ಎನ್. ಶಿವಣ್ಣ ನವರ ಹೆಸರು ಇರುವುದು ದೃಢೀಕೃತ ದಾಖಲೆಯಲ್ಲಿ ತಿಳಿದುಬರುವುದಿಲ್ಲ. ಪರಿಹಾರ ಪಡೆಯಲಾದ ಕಡತದಲ್ಲಿ ಈ 16 ಜನರ ಪೈಕಿ ಕ್ರಮ ಸಂಖ್ಯೆ:3 ರಲ್ಲಿ ಶ್ರೀ ಎಲ್.ಎನ್. ಶಿವಣ್ಣ ಎಂದು ತಿದ್ದಿ ಬರೆದಂತೆ ಕಂಡುಬರುತ್ತದೆ. (ಕ್ರಮ ಸಂಖ್ಯೆ : 3 ರಲ್ಲಿ ರೇವಣ್ಣ ಸಿದ್ದಯ್ಯ ಎಂದು ದೃಢೀಕೃತ ಪ್ರತಿಯಲ್ಲಿರುತ್ತದೆ). ಜಿಲ್ಲಾಧಿಕಾರಿಗಳ ಆದೇಶದಂತೆ ತಯಾರಿಸಲಾದ ನಕಾಶೆಯ ಬ್ಲಾಕ್ ನಂ. 34 ರಲ್ಲಿ ಶ್ರೀಮತಿ ನಾರಾಯಣಮ್ಮ, ಮುನಿಯಮ್ಮ ಎಂಬುವವರು ಸ್ವಾಧೀನದಲ್ಲಿದ್ದರೂ ಕೂಡಾ ದಿನಾಂಕ: 09.06.2009 ರಂದು ಶ್ರೀ ಬಿ.ಎಲ್. ಹನುಮಂತರಾಜು ಬಿನ್ ಎಲ್.ಎನ್. ಶಿವಣ್ಣ ರವರು ಸ್ವಾಧೀನದಲ್ಲಿರುತ್ತಾರೆಂದು ಶ್ರೀಮತಿ ಧನಲಕ್ಷ್ಮಿ ಇವರು ತನ್ನ ಅಧೀನ ಅಧಿಕಾರಿಗಳಿಂದ ಮಹಜರ್ ತಯಾರಿಸಿ ತಮ್ಮ ನೈಜತೆಯ ವರದಿಯಲ್ಲಿ ಶ್ರೀ ಎಲ್. ಎನ್ ಶಿವಣ್ಣರವರ ಮಗನಾದ ಬಿ.ಎಲ್. ಹನುಮಂತರಾಜು ರವರು ಸ್ವಾಧೀನಾನುಭವದಲ್ಲಿರುತ್ತಾರೆಂದೂ, ಹಾಗೂ ಶಿವಣ್ಣ ಮತ್ತು ಹನುಮಂತರಾಜುರವರಿಗೆ ಯಾವುದೇ ಸಂಬಂಧವಿಲ್ಲದೇ ಇದ್ದರೂ ಕೂಡ ಸರ್ಕಾರದಿಂದ ಕಾನೂನು ಬಾಹಿರವಾಗಿ ಪರಿಹಾರ ಪಡೆಯಲು ಅನುಕೂಲ ಮಾಡಿಕೊಟ್ಟು ಜೆರಾಕ್ಸ್ ಆದೇಶದ ಪ್ರತಿಯನ್ನೆ ನೈಜ ದಾಖಲಾತಿ ಎಂಬಂತೆ ಆದೇಶಿಸಿ ಇತರೆ ಆರೋಪಿತರುಗಳ ಸಂಚಿನಲ್ಲಿ ಭಾಗಿಯಾಗಿ ಶ್ರೀ ಐ. ಬಾಲರಾಜು ರವರಿಂದ ಲಂಚದ ಹಣವನ್ನು ಪಡೆದುಕೊಳ್ಳುವ ಮೂಲಕ ಬಿ.ಎಲ್. ಹನುಮಂತರಾಜುರವರಿಗೆ ಸಂಬಂಧಿಸಿದ ಕಡತವನ್ನು ವಿಷಯ ನಿರ್ವಾಹಕರಿಗೆ ವಾಪಸ್ ನೀಡದೇ ತಾವೇ ಇಟ್ಟುಕೊಂಡು ಅವರು ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದರಿಂದ ಅವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆಯ ಕಲಂ 7, 13(1) (ಡಿ) ಇದರ ಜೊತೆಗೆ ಓದಲಾದ ಕಲಂ 13(2)ರಡಿಯಲ್ಲಿ, ಭಾರತೀಯ ದಂಡ ಸಂಹಿತೆಯ ಕಲಂ 471, 120(ಬಿ) ರನ್ವಯ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಕರ್ನಾಟಕ ಲೋಕಾಯುಕ್ತ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರಿಗೆ ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿ, 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖನಗಳನ್ನು ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸತಕ್ಕದ್ದಾಗಿದೆ ಅಥವಾ ಕಾರ್ಯಗತಗೊಳಿಸತಕ್ಕದ್ದಾಗಿದೆ. ಹಾಗೂ ಅದೇ ನಿಯಮಾವಳಿಗಳ ನಿಯಮ 19(1)(ಬಿ)ರ ಪ್ರಕಾರ ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖನಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳತಕ್ಕದ್ದಾಗಿದೆ ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸಲಾಗಿದೆಯೆಂದು ಭಾವಿಸತಕ್ಕದ್ದಾಗಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರಂತೆ ಈ ಮೇಲ್ಕಂಡ ಆದೇಶವನ್ನು ಶ್ರೀ ಎಸ್. ಬಾಲಕೃಷ್ಣಯ್ಯ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ ರವರು ದಿನಾಂಕ: 20-06-2011 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್.ನಂ. 1717

## ಕಂದಾಯ ಸಚಿವಾಲಯ

**ವಿಷಯ** : ಶ್ರೀಮತಿ ಧನಲಕ್ಷ್ಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು, ಹಾಲಿ ತಹಶೀಲ್ದಾರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು ಇವರು ಎಸಗಿದ ಹಣಕಾಸಿನ ಅಕ್ರಮಗಳ ಬಗ್ಗೆ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ–44/2010, ದಿನಾಂಕ:07–04–2011.
2. ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರ ವಿಭಾಗದ ಮೊ.ಸಂ: 44/10ರ ಪ್ರಥಮ ವರ್ತಮಾನ ವರದಿ ದಿನಾಂಕ: 21–09–2010.
3. ತನಿಖಾಧಿಕಾರಿಗಳ ಅಂತಿಮ ವರದಿ ದಿನಾಂಕ: 07–04–2011, ಶೋಧನಾ ಪಂಚನಾಮೆ ಬರವಣಿಗೆ ಮಹಜರ್, ಅಮಾನತ್ತು ಮಹಜರ್, ಲಾಕರ್ ಮಹಜರ್, ಸಾಕ್ಷಿಗಳ ಹೇಳಿಕೆಗಳು ಇತ್ಯಾದಿ.

**ಪ್ರಸ್ತಾವನೆ:**

ತನಿಖಾಧಿಕಾರಿಯವರು ಉಲ್ಲೇಖ (2) ರಂತೆ ಪ್ರಕರಣವನ್ನು ದಾಖಲಿಸಿ ತನಿಖೆಯನ್ನು ಕೈಗೊಂಡಿದ್ದು, ತನಿಖಾ ಕಾಲದಲ್ಲಿ ಶ್ರೀಮತಿ ಧನಲಕ್ಷ್ಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ(ಅ)ಹಾಲಿ ತಹಶೀಲ್ದಾರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರು 13(1)(ಡಿ) ಜೊತೆಗೆ 13(2) ಲಂಚ ವಿರೋಧ ಕಾಯ್ದೆ 1988 ಮತ್ತು 120 (ಬಿ) ಐಪಿಸಿ ಜೊತೆಗೆ 192(ಎ) ಕೆಎಲ್‌ಆರ್ ಆಕ್ಟ್ ರಡಿ ಅಪರಾಧವೆಸಗಿರುವುದು ತನಿಖೆಯಲ್ಲಿ ಕಂಡುಬಂದಿರುತ್ತದೆ.

ಪ್ರಕರಣದ ತನಿಖಾಧಿಕಾರಿಯು ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಉಲ್ಲೇಖ (2&3) ರಂತೆ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 07–04–2011 ಉಲ್ಲೇಖ (1) ರೊಳಗೆ ಕಳುಹಿಸುತ್ತಾ, ಆಪಾದಿತಳನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು 13(1)(ಡಿ) ಜೊತೆಗೆ 13(2) ಲಂಚ ನಿರೋಧ ಕಾಯ್ದೆ 1988 ಮತ್ತು ಕಲಂ 120(ಬಿ) ಐಪಿಸಿ ಜೊತೆಗೆ 192(ಎ) ಕೆಎಲ್‌ಆರ್ ಆಕ್ಟ್ ಅಡಿಯಲ್ಲಿ ಮಂಜೂರಾತಿಗಾಗಿ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ: ಲೋಕ್ ಐಎನ್‌ವಿ(ಜಿ)ಸಿಟಿ ಕ್ರೈಂ 44/2010, ದಿನಾಂಕ: 07–04–2011 ರೊಂದಿಗೆ ಕಳುಹಿಸಿಕೊಟ್ಟ ಪ್ರಥಮ ವರ್ತಮಾನ ವರದಿ, ತನಿಖಾಧಿಕಾರಿಯ ಅಂತಿಮ ವರದಿ, ಅಕ್ರಮವಾಗಿ ಹಣ ಪಾವತಿಸಿರುವ ಕೆಐಎಡಿಬಿ ಯ ಮೂಲ ಕಡತಗಳು, ರೆವಿನ್ಯೂ ತಂಡದವರು ನೀಡಿದ ವರದಿ, ವಿಶೇಷ ಜಿಲ್ಲಾಧಿಕಾರಿಗಳು ನೀಡಿದ ವರದಿ, ಪಂಚರುಗಳ ಹೇಳಿಕೆ ಆರೋಪಗಳನ್ನು ರುಜುವಾತುಪಡಿಸುವ ಸಾಕ್ಷಿದಾರರುಗಳ ಹೇಳಿಕೆ ಮತ್ತು ದಾಸ್ತಾವೇಜು, ಆರೋಪಿತ ಶ್ರೀಮತಿ ಧನಲಕ್ಷ್ಮಿ ರವರು ಕೆಐಎಡಿಬಿ ಎಸ್‌ಎಲ್‌ಎಓ ರವರಿಗೆ ನೀಡಿರುವ ಪತ್ರ ಮತ್ತಿತರೆ ದಾಖಲೆಗಳನ್ನು ಸಮಗ್ರವಾಗಿ ಪರಿಶೀಲಿಸಿದ್ದೇನೆ.

ತನಿಖಾಧಿಕಾರಿಗಳಾದ ಶ್ರೀ ಕೆ. ರವಿಶಂಕರ್, ಪೊಲೀಸ್ ಇನ್‌ಸ್ಪೆಕ್ಟರ್, ನಗರ ವಿಭಾಗ, ಕರ್ನಾಟಕ ಲೋಕಯುಕ್ತ, ಬೆಂಗಳೂರು ರವರು ಶ್ರೀಮತಿ ಧನಲಕ್ಷ್ಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ ಅಪರ(ತಾ) ಹಾಲಿ ತಹಶೀಲ್ದಾರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ವಿರುದ್ಧ ಗುನ್ನೆ ಸಂಖ್ಯೆ: 44/2010 ರಲ್ಲಿ ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಡಿ) ಜೊತೆಗೆ 13(2) ಮತ್ತು 120(ಬಿ)ಐಪಿಸಿ ಹಾಗೂ 192(ಎ) ಕೆಎಲ್‌ಆರ್ ಆಕ್ಟ್ ಅಡಿಯಲ್ಲಿ ಆರೋಪವೆಸಗಿರುವ ಬಗ್ಗೆ ಈ ಕೆಳಗಿನಂತೆ ವರದಿ ಮಾಡಿರುತ್ತಾರೆ.

ಆಪಾದಿತರಾದ ಶ್ರೀಮತಿ ಧನಲಕ್ಷ್ಮಿ ರವರು ಶ್ರೀಮತಿ ಸವಿತಾ ಕೋಂ ರಘು ಮತ್ತು ಶ್ರೀ ಬೈರಪ್ಪ ಬಿನ್ ನಂಜಪ್ಪರವರಿಗೆ ಕೆಐಎಡಿಬಿ ಯಿಂದ ಭೂ ಪರಿಹಾರ ಪಡೆಯಲು ಅನುಕೂಲ ಮಾಡಿಕೊಡುವ ಉದ್ದೇಶದಿಂದ ಶ್ರೀ ಹೆಚ್.ಎನ್. ಬೈರಪ್ಪ ಬಿನ್ ನಂಜಪ್ಪರವರಿಗೆ ಹಾಗೂ ಕೃಷ್ಣಸ್ವಾಮಿ ಬಿನ್ ಪೆರುಮಾಳ್ ಶೆಟ್ಟಿಯಾರ್ (ಸವಿತಾ ಕೋಂ ರಘು) ರವರಿಗೆ ಬಂಡಿಕೊಡಿಗೆಪಾಳ್ಯದ ಸರ್ವೆ ನಂ.7 ರಲ್ಲಿ ಸರ್ಕಾರಿ ಗೋಮಾಳದ ಜಮೀನು (ತಲಾ 4–00 ಎಕರೆಯಂತೆ ಒಟ್ಟು 8–00 ಎಕರೆ) ಮಂಜೂರಾಗದಿದ್ದರೂ ಸಹ ಮೂಲ ದಾಖಲಾತಿಗಳನ್ನು ಪರಿಶೀಲಿಸದೆ ಆರೋಪಿತರಾದ ಶ್ರೀಮತಿ ಸವಿತಾ, ಶ್ರೀ ಬೈರಪ್ಪ ಮತ್ತು ರಘು, ಸೂರ್ಯಕಾಂತ್ ರವರೊಂದಿಗೆ ಒಳಸಂಚು ನಡೆಸಿ, ಸದರಿ ಸ್ವತ್ತನ್ನು ತಿಮ್ಮರಾಯಪ್ಪರವರು ಬಗರ್ ಹುಕ್ಕುಂ ನಲ್ಲಿ 1974ರಿಂದ ಉಳುಮೆ ಮಾಡಿಕೊಂಡು ಬರುತ್ತಿರುವ ಬಗ್ಗೆ ಪಹಣಿಯಲ್ಲಿ ನಮೂದಾಗಿದ್ದರೂ ಉದ್ದೇಶ ಪೂರ್ವಕವಾಗಿ ಕೇವಲ ಅರ್ಜಿದಾರರು ಅರ್ಜಿಯೊಂದಿಗೆ ಲಗತ್ತಿಸಿರುವ ದರಖಾಸ್ತು ರಿಜಿಸ್ಟರ್ ಎಕ್ಸ್‌ಟ್ರಾಕ್ಟ್ ಪ್ರತಿಯ ಆಧಾರದ ಮೇರೆಗೆ ನೈಜತೆಯನ್ನು ಮರೆಮಾಚಿ ಅಪ್ರಮಾಣಿಕವಾಗಿ ಭೂ ಪರಿಹಾರವನ್ನು ನೀಡಲು ವಿಶೇಷ ಭೂಸ್ವಾಧೀನಾಧಿಕಾರಿಗಳಿಗೆ ವರದಿಯನ್ನು ನೀಡಿ, ಶ್ರೀ ಬೈರಪ್ಪ ಬಿನ್ ನಂಜಪ್ಪ ಹಾಗೂ ಸವಿತಾ ಕೋಂ ರಘು ರವರಿಗೆ ಒಟ್ಟು ರೂ. 4,96,00,000/– ಗಳನ್ನು ಅಕ್ರಮ ಪರಿಹಾರ ಕೊಡಿಸಲು ಅನುವು ಮಾಡಿಕೊಟ್ಟು ಕೆಐಎಡಿಬಿ ಸಂಸ್ಥೆಗೆ ನಷ್ಟ ಉಂಟುಮಾಡುವ ಮೂಲಕ ಕರ್ತವ್ಯದಲ್ಲಿ ದುರ್ನಡತೆಯನ್ನು ಎಸಗಿರುವ ಹಿನ್ನೆಲೆಯಲ್ಲಿ ಅವರ ವಿರುದ್ಧ ಲಂಚದ ನಿರೋಧ ಕಾಯ್ದೆ 1988ರ ಕಲಂ 13(1)(ಡಿ) ಸಹವಾಚನ 13(2) ಭಾರತೀಯ ದಂಡಸಂಹಿತೆ ಕಲಂ 120 (ಬಿ) ಹಾಗೂ ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ಕಾಯ್ದೆ 2007ರ ಕಲಂ 192 (ಎ) ರಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಮೇಲ್ನೋಟಕ್ಕೆ ಸ್ಪಷ್ಟವಾದ ಒಂದು ಪ್ರಕರಣವಿರುವುದು ಸರ್ಕಾರಕ್ಕೆ ಮನದಟ್ಟಾಗಿದೆ. ಆದುದರಿಂದ ಕರ್ನಾಟಕ ಲೋಕಾಯುಕ್ತ ಕಛೇರಿಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ವರದಿಯನ್ನು ಸರ್ಕಾರವು ಪರಿಗಣಿಸಿ ಸದರಿ ತಹಶೀಲ್ದಾರ್‌ರವರು ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 18 ಎಡಿಇ 2011, ಬೆಂಗಳೂರು, ದಿನಾಂಕ: 20–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಪಿತರಾದ ಶ್ರೀಮತಿ ಧನಲಕ್ಷ್ಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು ಹಾಲಿ ತಹಶೀಲ್ದಾರ್, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರು ಈ ಹಿಂದೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕಿನ ತಹಶೀಲ್ದಾರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಕೆ.ಐ.ಎ.ಡಿ.ಬಿ ಯಿಂದ ಪ್ರಾಥಮಿಕ ಅಧಿಸೂಚನೆಯಿಂದಾಗಿ ಭೂ ಸ್ವಾಧೀನ ಪ್ರಕ್ರಿಯೆ ಅವಧಿಯಲ್ಲಿ ಗೋಮಾಳದ ಜಮೀನನ್ನು ಕಲಂ(8) ಭೂ ಮಂಜೂರಾತಿ ಅಡಿಯಲ್ಲಿ ರಕ್ಷಿಸದೆ 136(3) ಮತ್ತು ಪ್ರಸ್ತಾಪಿಸದೆ ಆರೋಪಿತರಾದ ಶ್ರೀ ಬೈರಪ್ಪ ಮತ್ತು ರಘು, ಸೂರ್ಯಕಾಂತ್ ರವರೊಂದಿಗೆ ಒಳಸಂಚು ನಡೆಸಿದ್ದುದಲ್ಲದೆ ಸದರಿ ಸ್ವತ್ತನ್ನು ತಿಮ್ಮರಾಯಪ್ಪ ರವರು ಬಗರ್ ಹುಕುಂ ನಲ್ಲಿ 1974 ರಿಂದ

ಉಳುಮೆ ಮಾಡಿಕೊಂಡು ಬರುತ್ತಿರುವ ಬಗ್ಗೆ ಪಹಣಿಯಲ್ಲಿ ನಮೂದಾಗಿದ್ದರೂ ಉದ್ದೇಶ ಪೂರ್ವಕವಾಗಿ ಕೇವಲ ಅರ್ಜಿದಾರರು ಅರ್ಜಿಯೊಂದಿಗೆ ಲಗತ್ತಿಸಿರುವ ದರಖಾಸ್ತು ಮಾಡಿ ನೈಜತೆಯನ್ನು ಮರೆಮಾಚಿ ಅಪ್ರಮಾಣಿಕವಾಗಿ ಭೂ ಪರಿಹಾರವನ್ನು ನೀಡಲು ವಿಶೇಷ ಭೂ ಸ್ವಾಧೀನಾಧಿಕಾರಿಗಳಿಗೆ ವರದಿಯನ್ನು ನೀಡಿ ಕೆ.ಐ.ಎ.ಡಿ.ಬಿ ಸಂಸ್ಥೆಗೆ ನಷ್ಟ ಉಂಟುಮಾಡುವ ಮೂಲಕ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಎಸಗಿರುತ್ತಾರೆ. ಇವರನ್ನು ಹುದ್ದೆಯಿಂದ ತೆಗೆದು ಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆಯ ಕಲಂ 13(1) (ಡಿ) ಇದರ ಜೊತೆಗೆ ಓದಲಾದ ಕಲಂ 13(2) ರಡಿಯಲ್ಲಿ, ಭಾರತೀಯ ದಂಡ ಸಂಹಿತೆಯ ಕಲಂ 120(ಬಿ) ಹಾಗೂ ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ಕಾಯ್ದೆ 2007 ರ ಕಲಂ 192(ಎ) ರನ್ವಯ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಕರ್ನಾಟಕ ಲೋಕಾಯುಕ್ತ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರಿಗೆ ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿ, 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖನಗಳನ್ನು ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸತಕ್ಕದ್ದಾಗಿದೆ ಅಥವಾ ಕಾರ್ಯಗತಗೊಳಿಸತಕ್ಕದ್ದಾಗಿದೆ. ಹಾಗೂ ಅದೇ ನಿಯಮಾವಳಿಗಳ ನಿಯಮ 19(1)(ಬಿ)ರ ಪ್ರಕಾರ ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖನಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳತಕ್ಕದ್ದಾಗಿದೆ ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸಲಾಗಿದೆಯೆಂದು ಭಾವಿಸತಕ್ಕದ್ದಾಗಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರಂತೆ ಈ ಮೇಲ್ಕಂಡ ಆದೇಶವನ್ನು ಶ್ರೀ ಎಸ್. ಬಾಲಕೃಷ್ಣಯ್ಯ ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ ರವರು ದಿನಾಂಕ: 20–06–2011 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್.ನಂ. 1718

## ಕಂದಾಯ ಸಚಿವಾಲಯ

**ವಿಷಯ :** ಬೀದರ್ ತಾಲ್ಲೂಕಿನ ನೌಬಾದ ಗ್ರಾಮದ ಸರ್ಕಾರಿ ಭೂಮಿ ಸ.ನಂ. 18ರಲ್ಲಿ ವಿಸ್ತೀರ್ಣ 3–00 ಎಕರೆ ಜಮೀನನ್ನು ಮೆ: ಕಾಮಿನೇನಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಕಟ್ಟಡ ಸಲುವಾಗಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್ ರವರ ಪತ್ರ ಸಂಖ್ಯೆ: ಕಂ/ಎಲ್‌ಎನ್‌ಡಿ/ಸಿಆರ್–36/2010–11/1791 ದಿನಾಂಕ: 12–5–2010.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್ ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ ಬೀದರ್ ಜಿಲ್ಲೆಯು ಹಿಂದುಳಿದ ಜಿಲ್ಲೆಯಾಗಿದ್ದು ಇಂದು ತೀವ್ರವಾಗಿ ಬೆಳೆಯುತ್ತಿರುವ ನಗರವಾಗಿದೆ. ಇಲ್ಲಿ ಯಾವುದೇ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಅಸ್ತಿತ್ವದಲ್ಲಿರುವುದಿಲ್ಲ ಯಾವುದೇ ಅಪಘಾತ ಸಂಭವಿಸಿದಲ್ಲಿ ದೂರದ ಹೈದ್ರಾಬಾದಿಗೆ ಹೋಗುವ ಪ್ರಸಂಗ ಒದಗಿಬರುತ್ತದೆ. ಜಿಲ್ಲೆಯ ಸಾರ್ವಜನಿಕ ಹಿತದೃಷ್ಟಿಯಿಂದ ಬೀದರ್ ನಗರದಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಸ್ಥಾಪನೆ ಅತ್ಯಂತ ಅವಶ್ಯಕವಾಗಿರುತ್ತದೆ ಎಂಬುದಾಗಿ ವರದಿ ಮಾಡಿರುತ್ತಾರೆ.

2) ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಕಟ್ಟಡಕ್ಕಾಗಿ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಜಮೀನು ಬೀದರ್ ತಾಲ್ಲೂಕಿನ ನೌಬಾದ ಗ್ರಾಮದ ಸ.ನಂ. 18ರಲ್ಲಿ ಒಟ್ಟು ವಿಸ್ತೀರ್ಣ 4ಎಕರೆ 38 ಗುಂಟೆ ಜಮೀನಿದ್ದು ಇದು ಸರ್ಕಾರಿ ಗಾಯರಾಣ ಎಂದು ವರ್ಗೀಕೃತವಾಗಿದ್ದು ಈ ಜಮೀನಿನ ಪೈಕಿ 3–00 ಎಕರೆ ಜಮೀನನ್ನು ಮೆ: ಕಾಮಿನೇನಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಸ್ಥಾಪಿಸುವ ಸಲುವಾಗಿ ಕರ್ನಾಟಕ ಉದ್ಯೋಗಮಿತ್ರ ರವರ ಮೂಲಕ ಮಂಜೂರು ಮಾಡುವ ಪ್ರಸ್ತಾವನೆ ಆಗಿರುತ್ತದೆ. ಈ ಬಗ್ಗೆ GIM ನಲ್ಲಿ ಕೂಡ ಎಂಓಯು ಆಗಿರುತ್ತದೆ. ಸದರಿ ಜಮೀನು ಬೀದರ್ ನಗರಾಭಿವೃದ್ಧಿ ಪ್ರಾಧಿಕಾರ ಬೀದರ್ ಇವರ ವರದಿ ಪ್ರಕಾರ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಬರುತ್ತದೆ. ಸರ್ಕಾರದಿಂದ ಅನುಮೋದನೆಯಾದ ಮಹಾಯೋಜನೆಯಲ್ಲಿ ಈ ಜಮೀನಿನ ಭೂ ಉಪಯೋಗ ಸರ್ಕಾರಿ ಮತ್ತು ಅರೆ ಸರ್ಕಾರಿ ವಲಯಕ್ಕಾಗಿ ಕಾಯ್ದಿರಿಸಲಾಗಿದೆ ಎಂಬುದಾಗಿ ವರದಿ ಮಾಡಿರುತ್ತಾರೆ.

3) ಸದರಿ ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ (ಕಪ್ಪು ಮಣ್ಣು) 13ಲಕ್ಷ (ಕೆಂಪು ಮಣ್ಣು) 12.5ಲಕ್ಷ ರೂ. ಇರುವುದಾಗಿ ತಿಳಿಸಿರುತ್ತಾರೆ. ಹಿಂದುಳಿದ ಜಿಲ್ಲೆ ಆಗಿರುವ ಬೀದರ್ ಜಿಲ್ಲೆಯಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯು ಸಾರ್ವಜನಿಕ ಹಿತದೃಷ್ಟಿಯಿಂದ ಅತ್ಯಂತ ಅವಶ್ಯಕತೆಯಾಗಿರುತ್ತದೆ ಎಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುವ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 20 ಎಲ್‌ಜಿಐ 2010, ಬೆಂಗಳೂರು, ದಿನಾಂಕ : 14–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ, ಬೀದರ್ ತಾಲ್ಲೂಕಿನ ನೌಬಾದ ಗ್ರಾಮದ ಸ.ನಂ. 18ರಲ್ಲಿನ 4ಎಕರೆ 38 ಗುಂಟೆ ಸರ್ಕಾರಿ ಗಾಯರಾಣ ಜಮೀನಿನ ಪೈಕಿ 3–00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4) ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರ ಹಾಗೂ ನಿಯಾಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1966ರ ನಿಯಮ 10(1)ರನ್ನು ಸಡಿಲಿಸಿ ಮೆ: ಕಾಮಿನೇನಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಕಟ್ಟಡಕ್ಕಾಗಿ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/168/ವೆಚ್ಚ–7/2011 ದಿನಾಂಕ: 12–4–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–3)

ಪಿ.ಆರ್. 1719

## ಕಂದಾಯ ಸಚಿವಾಲಯ

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಹುದ್ದೆಗಳನ್ನು ಸ್ಥಳಾಂತರಿಸುವ ಕುರಿತು.

**ಓದಲಾಗಿದೆ :** ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಸಿಬ್ಬಂದಿ–2–28/2007–08 ದಿನಾಂಕ: 13–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಗಳಿಗೆ ಮಂಜೂರಾಗಿದ್ದ ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಈ ಕೆಳಕಾಣಿಸಿದ ಉಪ ನೋಂದಣಿ ಕಛೇರಿಗಳಿಗೆ ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳೆಂದು (HQA SR) ಎಂಬ ಪದನಾಮ ನೀಡಿ ಸರ್ಕಾರದ ಆದೇಶಗಳನ್ವಯ ಸ್ಥಳಾಂತರಿಸಲಾಗಿದೆ.

| ಕ್ರ.ಸಂ. | ಈ ಮೊದಲು ಕೇಂದ್ರಸ್ಥಾನ ಸಹಾಯಕರ ಹುದ್ದೆಗಳು ಮಂಜೂರಾಗಿದ್ದ ಜಿಲ್ಲೆ ನೋಂದಣಿ ಕಛೇರಿಯ ಹೆಸರು | ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಕೇಂದ್ರಸ್ಥಾನ ಉಪನೋಂದಣಾಧಿಕಾರಿ (HQA SR) ಆಗಿ ಸ್ಥಳಾಂತರ ಮಾಡಿದ ಉಪ ನೋಂದಣಿ ಕಛೇರಿ ಹೆಸರು | ಸ್ಥಳಾಂತರ ಮಾಡಿದ ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|
| 1 | ಜಿಲ್ಲಾ ನೋಂದಣಿ ಕಛೇರಿ, ಗದಗ | ಉಪ ನೋಂದಣಿ ಕಛೇರಿ, ಬೆಂಗಳೂರು (ಉತ್ತರ) | ಕಂಇ 29 ಮುನೋಸೇ (2) 2002 ದಿ: 29–04–2003 |
| 2 | ಜಿಲ್ಲಾ ನೋಂದಣಿ ಕಛೇರಿ, ಚಿತ್ರದುರ್ಗ | ಉಪ ನೋಂದಣಿ ಕಛೇರಿ, ಗಾಂಧಿನಗರ | ಕಂಇ 28 ಮುನೋಸೇ (2) 2003 ದಿ: 15–09–2003 |
| 3. | ಜಿಲ್ಲಾ ನೋಂದಣಿ ಕಛೇರಿ, ಚಾಮರಾಜನಗರ | ಉಪ ನೋಂದಣಿ ಕಛೇರಿ, ಶಿವಾಜಿನಗರ | ಕಂಇ 39 ಮುನೋಸೇ (2) ದಿ: 12–11–2004 |
| 4 | ಜಿಲ್ಲಾ ನೋಂದಣಿ ಕಛೇರಿ, ರಾಯಚೂರು | ಉಪ ನೋಂದಣಿ ಕಛೇರಿ, ಗುಲಬರ್ಗಾ | ಕಂಇ 39 ಮುನೋಸೇ (2) 2003 ದಿ: 19–08–2003 |

ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಕೇಂದ್ರಸ್ಥಾನ ಉಪ ನೋಂದಣಾಧಿಕಾರಿ HQA SR ಎಂದು ಉಪ ನೋಂದಣಿ ಕಛೇರಿಗಳಿಗೆ ಸ್ಥಳಾತರ ಮಾಡಿರುವುದರಿಂದ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಗಳಲ್ಲಿ ಕೇಂದ್ರಸ್ಥಾನ ಸಹಾಯಕರ ಹುದ್ದೆಗಳ ಅನುಪಸ್ಥಿತಿ ಉಂಟಾಗಿರುತ್ತದೆ, ಕೇಂದ್ರಸ್ಥಾನ ಸಹಾಯಕರ ಒಟ್ಟು ವೃಂದ ಬಲದಲ್ಲಿ ವ್ಯತ್ಯಾಸವಾಗಿರುತ್ತದೆ, ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಕೇಂದ್ರಸ್ಥಾನ ಸಹಾಯಕರ ಸಂಖ್ಯಾಬಲ 31 ಆಗಿದ್ದು, ಮೇಲೆ ತಿಳಿಸಿರುವಂತೆ ಸ್ಥಳಾಂತರಗೊಳಿಸಿರುವ ಹಿನ್ನೆಲೆಯಲ್ಲಿ 27 ಕೇಂದ್ರಸ್ಥಾನ ಸಹಾಯಕರ ಹುದ್ದೆಗಳು ಮಾತ್ರ ಲಭ್ಯವಿದ್ದು, ಇನ್ನು 4 ಕೇಂದ್ರಸ್ಥಾನ ಸಹಾಯಕರ ಹುದ್ದೆಗಳಲ್ಲಿ ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳ ಹುದ್ದೆಗಳಾಗಿ ಪರಿವರ್ತನೆಗೊಂಡು ಪದವೃಂದ ನಿರ್ವಹಣೆ ಲೋಪವಾಗಿರುತ್ತದೆ, ಈ ನ್ಯೂನತೆಗಳನ್ನು ಸರಿಪಡಿಸದೆ ಇದ್ದಲ್ಲಿ ಕೇಂದ್ರಸ್ಥಾನ ಸಹಾಯಕರ ವೃಂದ ಬಲ ಹೆಚ್ಚು ಕಡಿಮೆಯಾಗುತ್ತದೆ ಅಲ್ಲದೆ ಆಯಾ ಜಿಲ್ಲಾ ನೋಂದಣಾಧಿಕಾರಿಗಳ ಆಡಳಿತ ನಿರ್ವಹಣೆ ಕುಂಠಿತಗೊಳ್ಳುವುದರ ಜೊತೆಗೆ ಸಾರ್ವಜನಿಕ ಕೆಲಸ ಕಾರ್ಯಗಳು ಹಾಗೂ ಆಡಳಿತ ಕೆಲಸಗಳಿಗೆ ತಡೆ ಉಂಟಾಗುತ್ತದೆ ಮತ್ತು ಕೇಂದ್ರಸ್ಥಾನ ಸಹಾಯಕರ ಹುದ್ದೆಗಳ ಅನುಪಸ್ಥಿತಿಯಲ್ಲಿ ಉಪ ನೋಂದಣಿ ಕಛೇರಿಗಳ ಪರಿವೀಕ್ಷಣಾ ಕೆಲಸ ಸ್ಥಗಿತಗೊಂಡಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ಆದಾಯ ನಷ್ಟ ಸಂಭವಿಸುವ ಸಾಧ್ಯತೆ ಸಹ ಇರುತ್ತದೆ, ಅಲ್ಲದೆ ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳ ಹುದ್ದೆಯು ಇಲಾಖೆಯ ವೃಂದ ಮತ್ತು ನೇಮಕಾತಿಯಲ್ಲಿ ಇಲ್ಲದೆ ಇರುವುದರಿಂದ, ಈ ಹುದ್ದೆಗೆ ನಿಯಮದ ಸಮರ್ಥನೆ ಇರುವುದಿಲ್ಲವೆಂದು ತಿಳಿಸಿ, ಮೇಲೆ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಈ ಕೆಳಗೆ ಪ್ರಸ್ತಾಪಿಸಿರುವ ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳ HQA SR ಹುದ್ದೆಗಳನ್ನು ಕೇಂದ್ರಸ್ಥಾನ ಸಹಾಯಕರೆಂದು ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಗೆ ಮರು ಸ್ಥಳಾಂತರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರ.ಸಂ. | ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳ ಹುದ್ದೆ ಮಂಜೂರಾಗಿದ್ದ ಕಛೇರಿಯ ಹೆಸರು. | ಕೇಂದ್ರಸ್ಥಾನ ಸಹಾಯಕರೆಂದು ಸ್ಥಳಾಂತರಿಸಬೇಕಾದ ಜಿಲ್ಲಾ ನೋಂದಣಿ ಕಛೇರಿಯ ಹೆಸರು |
|---|---|---|
| 1. | ಉಪ ನೋಂದಣಿ ಕಛೇರಿ, ಬೆಂಗಳೂರು (ಉತ್ತರ) | ರಾಜಾಜಿನಗರ |
| 2. | ಉಪ ನೋಂದಣಿ ಕಛೇರಿ, ಗಾಂಧಿನಗರ | ಗಾಂಧಿನಗರ |
| 3. | ಉಪ ನೋಂದಣಿ ಕಛೇರಿ, ಶಿವಾಜಿನಗರ | ಶಿವಾಜಿನಗರ |
| 4. | ಉಪ ನೋಂದಣಿ ಕಛೇರಿ, ಗುಲಬರ್ಗಾ | ಗುಲಬರ್ಗಾ |

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 1 ಮುನೋಸೇ (1) 2011, ಬೆಂಗಳೂರು, ದಿನಾಂಕ : 16–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 29 ಮುನೋಸೇ (2) 2002 ದಿನಾಂಕ: 29–04–2003, ಕಂಇ 28 ಮುನೋಸೇ (2) 2003 ದಿ: 15–9–2003, ಕಂಇ 39 ಮುನೋಸೇ (2) ದಿ: 12–11–2004 ಮತ್ತು ಕಂಇ 39 ಮುನೋಸೇ (2) 2003 ದಿ: 19–08–2003ಗಳನ್ನು ರದ್ದುಪಡಿಸಿದೆ. ಸರ್ಕಾರದ ರಾಜಸ್ವ ಹೆಚ್ಚಿಸುವ ದೃಷ್ಟಿಯಿಂದ ಹಾಗೂ ಸಾರ್ವಜನಿಕರಿಗೆ ಆಡಳಿತದ ಅನುಕೂಲ ಹೆಚ್ಚಿಸುವ ದೃಷ್ಟಿಯಿಂದ ಈ ಕೆಳಕಂಡ ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಅವುಗಳ ಹೆಸರಿನ ಮುಂದೆ ಸೂಚಿಸಿರುವ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಗೆ ಸ್ಥಳಾಂತರಿಸಿ ಆದೇಶಿಸಿದೆ.

| ಕ್ರ. ಸಂ. | ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳ ಹುದ್ದೆಗಳಾಗಿ ಸ್ಥಳಾಂತರಿಸಲಾಗಿದ್ದ ಕಛೇರಿಯ ಹೆಸರು. | ಕೇಂದ್ರಸ್ಥಾನ ಸಹಾಯಕರೆಂದು ಸ್ಥಳಾಂತರಿಸಿದ ಜಿಲ್ಲಾ ನೋಂದಣಿ ಕಛೇರಿಯ ಹೆಸರು |
|---|---|---|
| 1. | ಉಪ ನೋಂದಣಿ ಕಛೇರಿ, ಬೆಂಗಳೂರು (ಉತ್ತರ) | ರಾಜಾಜಿನಗರ |
| 2. | ಉಪ ನೋಂದಣಿ ಕಛೇರಿ, ಗಾಂಧಿನಗರ | ಗಾಂಧಿನಗರ |
| 3. | ಉಪ ನೋಂದಣಿ ಕಛೇರಿ, ಶಿವಾಜಿನಗರ | ಶಿವಾಜಿನಗರ |
| 4. | ಉಪ ನೋಂದಣಿ ಕಛೇರಿ, ಗುಲಬರ್ಗಾ | ಗುಲಬರ್ಗಾ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1720

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದ ನೇಕಾರರಿಗೆ ಸಹಕಾರ ಸಂಘಗಳು/ಸಹಕಾರ ಬ್ಯಾಂಕುಗಳು ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ 2011–12ನೇ ಸಾಲಿಗೆ ನೀಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಿಒ 56 ಸಿಎಲ್ಎಸ್ 2009, ದಿನಾಂಕ: 02–04–2009.

2) ಸರ್ಕಾರಿ ಆದೇಶ ಸಂಖ್ಯೆ: ಸಿಒ70 ಸಿಎಲ್ಎಸ್ 2010 (ಭಾ–1) ದಿನಾಂಕ: 16–03–2011.

**ಪ್ರಸ್ತಾವನೆ :**

ಮೇಲೆ ಓದಲಾದ (1) ಮತ್ತು (2)ರ ಆದೇಶಗಳಲ್ಲಿ 2009–10 ಹಾಗೂ 2010–11ನೇ ಸಾಲುಗಳಿಗೆ ನೇಕಾರರ ಸಹಕಾರ ಸಂಘಗಳು/ಪತ್ತಿನ ಸಹಕಾರ ಸಂಘಗಳು/ ಸಹಕಾರ ಬ್ಯಾಂಕುಗಳು/ ಕೃಷಿಯೇತರ ಪತ್ತಿನ ಸಹಕಾರ ಸಂಘಗಳು ರಾಜ್ಯದ ನೇಕಾರರಿಗೆ ನೇಕಾರಿಕೆ ಉದ್ದೇಶಗಳಿಗಾಗಿ ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಕೆಲವು ಷರತ್ತುಗಳಿಗೊಳಪಟ್ಟು ಒದಗಿಸಲು ಮಂಜೂರಾತಿ ನೀಡಲಾಗಿರುತ್ತದೆ.

ರಾಜ್ಯದ ನೇಕಾರರ ಸಹಕಾರ ಸಂಘಗಳು/ಪತ್ತಿನ ಸಹಕಾರ ಸಂಘಗಳು/ ಸಹಕಾರ ಬ್ಯಾಂಕುಗಳು ನೇಕಾರಿಕೆಗೆ ಸಂಬಂಧಪಟ್ಟ ಚಟುವಟಿಕೆಗಳಾದ ಮಗ್ಗಗಳ ಸ್ಥಾಪನೆ, ಕಚ್ಚಾ ಸಾಮಗ್ರಿಗಳ ಖರೀದಿ ಹಾಗೂ ಸಿದ್ಧವಸ್ತುಗಳ ಉತ್ಪಾದನೆ ಇತ್ಯಾದಿ ನೇಕಾರಿಕೆ ಉದ್ದೇಶಗಳಿಗೆ ಸಾಲವನ್ನು ನೀಡುತ್ತಿದ್ದು, ಸದರಿ ಸಾಲಗಳನ್ನು ಶೇಕಡಾ 3ರ ಬಡ್ಡಿ ದರದಲ್ಲಿ ಒದಗಿಸುವ ಯೋಜನೆಯನ್ನು 2011–12ನೇ ಸಾಲಿನಲ್ಲಿ ಮುಂದುವರಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 156 ಸಿಎಲ್ಎಸ್ 2011, ಬೆಂಗಳೂರು, ದಿನಾಂಕ : 07–06–2011**

ಮೇಲೆ ವಿವರಿಸಲಾದ ಪರಿಸ್ಥಿತಿಯಲ್ಲಿ ನೇಕಾರರ ಸಹಕಾರ ಸಂಘಗಳು/ಪತ್ತಿನ ಸಹಕಾರ ಸಂಘಗಳು/ ಸಹಕಾರ ಬ್ಯಾಂಕುಗಳು ಕೃಷಿಯೇತರ ಪತ್ತಿನ ಸಹಕಾರ ಸಂಘಗಳು ರಾಜ್ಯದ ನೇಕಾರರಿಗೆ ರೂ. 3.00 ಲಕ್ಷಗಳವರೆಗಿನ ಮಿತಿಗೊಳಪಟ್ಟು ನೇಕಾರಿಕೆ ಉದ್ದೇಶಗಳಿಗಾಗಿ ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಒದಗಿಸಲು ಮಂಜೂರಾತಿ ನೀಡಲಾಗಿದೆ.

1. ಈ ಯೋಜನೆಯು ದಿನಾಂಕ: 01–04–2011 ರಿಂದ ನೇಕಾರರ ಸಹಕಾರ ಸಂಘಗಳು/ಪ್ರಾಥಮಿಕ ಕೃಷಿ/ಪತ್ತಿನ ಸಹಕಾರ ಸಂಘಗಳು/ ಸಹಕಾರ ಬ್ಯಾಂಕುಗಳು (ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು, ಪಟ್ಟಣ ಸಹಕಾರ ಬ್ಯಾಂಕುಗಳು ಹಾಗೂ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು) ಕೃಷಿಯೇತರ ಪತ್ತಿನ ಸಹಕಾರ ಸಂಘಗಳು ನೇಕಾರಿಕೆಗೆ ಸಂಬಂಧಪಟ್ಟ ಚಟುವಟಿಕೆಗಳಾದ ಮಗ್ಗಗಳ ಸ್ಥಾಪನೆ, ಕಚ್ಚಾ ಸಾಮಗ್ರಿಗಳ ಖರೀದಿ ಹಾಗೂ ಸಿದ್ಧವಸ್ತುಗಳ ಉತ್ಪಾದನೆ ಇತ್ಯಾದಿ ಉದ್ದೇಶಗಳಿಗೆ ನೀಡುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳಿಗೆ ಮಾತ್ರ ಅನ್ವಯಿಸುತ್ತದೆ.
2. ಈ ಯೋಜನೆಯಡಿ ನೇಕಾರರಿಗೆ ಪ್ರಾಥಮಿಕ ಹಂತದಲ್ಲಿ ನೇಕಾರರ ಸಹಕಾರ ಸಂಘಗಳು/ಪತ್ತಿನ ಸಹಕಾರ ಸಂಘಗಳು/ ಸಹಕಾರ ಬ್ಯಾಂಕುಗಳು ಒದಗಿಸುವ ಸಾಲಗಳ ಮೇಲೆ ಶೇಕಡಾ 9ರಷ್ಟು ಬಡ್ಡಿ ಸಹಾಯಧನವನ್ನು ರೂ. 3.00 ಲಕ್ಷಗಳ ಮಿತಿಗೊಳಪಟ್ಟು ಸರ್ಕಾರವು ಸಂಬಂಧಪಟ್ಟ ಪಟ್ಟಣ ಸಹಕಾರ ಬ್ಯಾಂಕುಗಳಿಗೆ/ ಕೃಷಿಯೇತರ ಪತ್ತಿನ ಸಹಕಾರ ಸಂಘಗಳಿಗೆ ಜಿಲ್ಲಾ ಕೇಂದ್ರ ಸಹಕಾರ (ಡಿ.ಸಿ.ಸಿ)ಬ್ಯಾಂಕುಗಳಿಗೆ ಮತ್ತು ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಕಸ್ಕಾರ್ಡ್) ಬ್ಯಾಂಕಿಗೆ ಒದಗಿಸುತ್ತದೆ ಹಾಗೂ ರೂ. 3.00 ಲಕ್ಷಗಳಿಗಿಂತ ಹೆಚ್ಚಿನ ಸಾಲಗಳ ಮೊಬಲಗಿಗೆ ಸಹಕಾರಿ ಸಂಸ್ಥೆಗಳು ಅನುಸರಿಸುವ ಬಡ್ಡಿ ದರವು ಅನ್ವಯವಾಗುತ್ತದೆ.

3. ರೂ. 3.00 ಲಕ್ಷದವರೆಗಿನ ಸಾಲಗಳಿಗೆ ಡಿ.ಸಿ.ಸಿ. ಬ್ಯಾಂಕುಗಳು ನೇಕಾರರ ಸಹಕಾರ ಸಂಘಗಳಿಗೆ ಶೇಕಡಾ 1ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸತಕ್ಕದ್ದು ಮತ್ತು ನೇಕಾರರ ಸಹಕಾರ ಸಂಘಗಳು ನೇಕಾರರಿಗೆ ಶೇಕಡಾ 3ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸತಕ್ಕದ್ದು. ಕಸ್ಕಾರ್ಡ್ ಬ್ಯಾಂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಪಿಕಾರ್ಡ್) ಬ್ಯಾಂಕುಗಳಿಗೆ ಶೇಕಡಾ 0.5 ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸತಕ್ಕದ್ದು ಮತ್ತು ಪಿಕಾರ್ಡ್ ಬ್ಯಾಂಕುಗಳು ಶೇಕಡಾ 3ರ ಬಡ್ಡಿ ದರದಲ್ಲಿ ನೇಕಾರರಿಗೆ ಸಾಲಗಳನ್ನು ಒದಗಿಸತಕ್ಕದ್ದು ಪಟ್ಟಣ ಸಹಕಾರ ಬ್ಯಾಂಕುಗಳು/ ಕೃಷಿಯೇತರ ಪತ್ತಿನ ಸಹಕಾರ ಸಂಘಗಳು ನೇಕಾರರಿಗೆ ಶೇಕಡಾ 3ರ ಬಡ್ಡಿದರದಲ್ಲಿ ಸಾಲಗಳನ್ನು ಒದಗಿಸತಕ್ಕದ್ದು. ರೂ. 3.00 ಲಕ್ಷಕ್ಕಿಂತ ಮೇಲ್ಪಟ್ಟ ಸಾಲಗಳಿಗೆ ಸಹಕಾರ ಸಂಸ್ಥೆಗಳು ವಿಧಿಸುವ ಸಾಮಾನ್ಯ ಬಡ್ಡಿದರವು ಅನ್ವಯಿಸುತ್ತದೆ.

4. ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್, ಡಿ.ಸಿ.ಸಿ ಬ್ಯಾಂಕುಗಳು ಮತ್ತು ನೇಕಾರರ ಸಹಕಾರ ಸಂಘಗಳು ಹಾಗೂ ಕಸ್ಕಾರ್ಡ್ ಬ್ಯಾಂಕು ಮತ್ತು ಪಿಕಾರ್ಡ್ ಬ್ಯಾಂಕುಗಳು ಹಾಗೂ ಪಟ್ಟಣ ಸಹಕಾರ ಬ್ಯಾಂಕುಗಳು/ ಕೃಷಿಯೇತರ ಪತ್ತಿನ ಸಹಕಾರ ಸಂಘಗಳು ನೇಕಾರರಿಗೆ ಸಾಲವನ್ನು ಶೇಕಡಾ 3ರ ಬಡ್ಡಿ ದರದಲ್ಲಿ ರೂ. 3.00 ಲಕ್ಷಗಳ ಮಿತಿಗೊಳಪಟ್ಟು ಒದಗಿಸಲು ಅಗತ್ಯವಾದ ಕ್ರಮವನ್ನು ಕೈಗೊಳ್ಳತಕ್ಕದ್ದು.

5. ಈ ಯೋಜನೆಯಡಿ ವಿತರಿಸಲಾದ ನೇಕಾರಿಕೆ ಸಾಲಗಳಿಗೆ ಸಂಬಂಧಿಸಿದಂತೆ ಸರ್ಕಾರದ ಬದ್ಧತೆಯು ರೂ. 3.00 ಲಕ್ಷಗಳಿಗೆ ಹಾಗೂ ಸಾಲದ ಅವಧಿಗೆ ಸೀಮಿತವಾಗಿರುತ್ತದೆ. ಆದಾಗ್ಯೂ ನೇಕಾರರು ನಿಗದಿತ ದಿನಾಂಕದಂದು ಸಾಲ ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದಲ್ಲಿ, ಸುಸ್ತಿಯಾದ ದಿನಾಂಕದಿಂದ ಸರ್ಕಾರದ ಬದ್ಧತೆ ಇರುವುದಿಲ್ಲ ಮತ್ತು ಸುಸ್ತಿಯಾದ ನೇಕಾರರು ಸಹಕಾರ ಸಂಘ/ ಸಹಕಾರ ಬ್ಯಾಂಕುಗಳಿಗೆ ಅವುಗಳ ಸಾಮಾನ್ಯ ಬಡ್ಡಿ ದರದಂತೆ ಮತ್ತು ಇತರ ಖರ್ಚುಗಳು ಇದ್ದಲ್ಲಿ ಅದರ ಸಹಿತ ಮರುಪಾವತಿಸಲು ಜವಾಬ್ದಾರರಾಗಿರುತ್ತಾರೆ. ಈ ಸ್ಕೀಮಿನಡಿ ಬಡ್ಡಿ ಸಹಾಯಧನವು ಪೂರ್ಣವಾಗಿ ಮರುಪಾವತಿಯಾಗುವ ಸಾಲಗಳಿಗೆ ಮಾತ್ರ ದೊರೆಯಲಿದೆ ಮತ್ತು ಸಾಲವು ನೇಕಾರರಿಗೆ ಬಿಡುಗಡೆಯಾದ ದಿನಾಂಕದಿಂದ ಪ್ರಾರಂಭವಾಗಿ ಸಾಲ ಮರುಪಾವತಿಯ ಗಡುವಿನ ದಿನಾಂಕದವರೆಗೆ ಅಥವಾ ಪೂರ್ಣವಾಗಿ ಸಾಲ ಮರುಪಾವತಿಯಾದ ದಿನಾಂಕ ಇದರಲ್ಲಿ ಯಾವುದು ಮೊದಲೋ ಆ ಅವಧಿಗೆ ರೂ. 3.00 ಲಕ್ಷಗಳ ಮಿತಿಗೊಳಪಟ್ಟು ಬಡ್ಡಿ ಸಹಾಯಧನವು ಅನ್ವಯಿಸುತ್ತದೆ. ಈ ಸಾಲಗಳು ಸುಸ್ತಿಯಾದರೂ ಕೂಡ ಸರ್ಕಾರದ ಬದ್ಧತೆಯು ಸಾಲದ ಅವಧಿಗೆ ರೂ. 3.00 ಲಕ್ಷಗಳಿಗೆ ಸೀಮಿತವಾಗಿರುತ್ತದೆ.

6. ನೇಕಾರರ ಸಹಕಾರ ಸಂಘಗಳು/ಪತ್ತಿನ ಸಹಕಾರ ಸಂಘಗಳು/ ಸಹಕಾರ ಬ್ಯಾಂಕುಗಳು (ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು, ಪಟ್ಟಣ ಸಹಕಾರ ಬ್ಯಾಂಕುಗಳು ಹಾಗೂ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು) ಪತ್ತಿನ ಸಹಕಾರ ಸಂಘಗಳು ಬಡ್ಡಿ ಸಹಾಯಧನವನ್ನು ನೇಕಾರಿಕೆ ಸಾಲಗಳ ವಸೂಲಾತಿ ಪ್ರಮಾಣವನ್ನು ಆಧರಿಸಿ, ತ್ರೈಮಾಸಿಕ ಕ್ಲೇಮು ಬಿಲ್ಲುಗಳನ್ನು ಸಿದ್ಧಪಡಿಸಿ ಸಹಕಾರ ಸಂಘಗಳ ನಿಬಂಧಕರ ಮಂಜೂರಾತಿಗಾಗಿ ಬೇಡಿಕೆ ಸಲ್ಲಿಸತಕ್ಕದ್ದು.

7. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.

8. ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾಲಕಾಲಕ್ಕೆ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ನೀಡಿದ ಸೂಚನೆಗಳನ್ನು ನೇಕಾರರ ಸಹಕಾರ ಸಂಘಗಳು/ ಸಹಕಾರ ಬ್ಯಾಂಕುಗಳು ಪಾಲಿಸತಕ್ಕದ್ದು.

9. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು/ ನೇಕಾರರ ಸಹಕಾರ ಸಂಘಗಳು ಡಿ.ಸಿ.ಸಿ. ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟಿದಲ್ಲಿ ಡಿ.ಸಿ.ಸಿ. ಬ್ಯಾಂಕುಗಳ ವ್ಯವಸ್ಥಾಪಕ ನಿರ್ದೇಶಕರು ಕ್ಲೇಮು ಬಿಲ್ಲುಗಳನ್ನು ತಯಾರಿಸಿ ಸಂಬಂಧಪಟ್ಟ ನಿಯಮ 441ರಡಿ ನೇಮಕವಾದ ಲೆಕ್ಕಪರಿಶೋಧನಾ ಸಹಾಯಕ/ ಉಪನಿರ್ದೇಶಕರಿಂದ ಪ್ರಮಾಣೀಕರಿಸಿದ ನಂತರ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ ಸಲ್ಲಿಸತಕ್ಕದ್ದು.

10. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು/ ನೇಕಾರರ ಸಹಕಾರ ಸಂಘಗಳು ವಾಣಿಜ್ಯ/ ಗ್ರಾಮೀಣ ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟಿದಲ್ಲಿ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ಕ್ಲೇಮು ಬಿಲ್ಲುಗಳನ್ನು ತಯಾರಿಸಿ ಜಿಲ್ಲೆಗೆ ಸಂಬಂಧಪಟ್ಟ ಲೆಕ್ಕಪರಿಶೋಧನಾ ಸಹಾಯಕ/ ಉಪನಿರ್ದೇಶಕರಿಂದ ಪ್ರಮಾಣೀಕರಿಸಿದ ನಂತರ ದೃಢೀಕರಿಸಿ ಸಲ್ಲಿಸತಕ್ಕದ್ದು.

11. ಪಿಕಾರ್ಡ್ ಬ್ಯಾಂಕುಗಳಿಗೆ ಸಂಬಂಧಸಿದ ಕ್ಲೇಮು ಬಿಲ್ಲುಗಳನ್ನು ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರು ತಯಾರಿಸಿ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿದ ನಂತರ ಕಸ್ಕಾರ್ಡ್ ಬ್ಯಾಂಕಿನ ನಿಯಮ 441ರಡಿ ನೇಮಕವಾದ ಲೆಕ್ಕಪರಿಶೋಧನಾ ಉಪ/ ಜಂಟಿ ನಿರ್ದೇಶಕರು ಪ್ರಮಾಣೀಕರಿಸಿದ ನಂತರ ಸಲ್ಲಿಸತಕ್ಕದ್ದು.

12. ಪಟ್ಟಣ ಸಹಕಾರಿ ಬ್ಯಾಂಕುಗಳ/ ಕೃಷಿಯೇತರ ಪತ್ತಿನ ಸಹಕಾರ ಸಂಘಗಳ ಕ್ಲೇಮು ಬಿಲ್ಲುಗಳನ್ನು ಸಂಬಂಧಪಟ್ಟ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ತಯಾರಿಸಿ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ಪ್ರಮಾಣಿಸಿದ ನಂತರ ಜಿಲ್ಲೆಗೆ ಸಂಬಂಧಪಟ್ಟ ಲೆಕ್ಕಪರಿಶೋಧನಾ ಸಹಾಯಕ/ ಉಪನಿರ್ದೇಶಕರಿಂದ ದೃಢೀಕರಿಸಿ ಸಲ್ಲಿಸತಕ್ಕದ್ದು.

13. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು/ ನೇಕಾರರ ಸಹಕಾರ ಸಂಘಗಳಿಗೆ ಸಂಬಂಧಿಸಿದ ಕ್ಲೇಮು ಬಿಲ್ಲುಗಳನ್ನು ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರ ಮೂಲಕ, ಪಿಕಾರ್ಡ್ ಬ್ಯಾಂಕುಗಳಿಗೆ ಸಂಬಂಧಿಸಿದ ಕ್ಲೇಮು ಬಿಲ್ಲುಗಳನ್ನು ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರ ಮೂಲಕ ಹಾಗೂ ಪಟ್ಟಣ ಸಹಕಾರ ಬ್ಯಾಂಕುಗಳಿಗೆ/ ಕೃಷಿಯೇತರ ಪತ್ತಿನ ಸಹಕಾರ ಸಂಘಗಳಿಗೆ ಸಂಬಂಧಪಟ್ಟ ಕ್ಲೇಮು ಬಿಲ್ಲುಗಳನ್ನು ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರ ಮೂಲಕ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು. ಸಹಕಾರ ಸಂಘಗಳ ನಿಬಂಧಕರು ಸದರಿ ಬಿಲ್ಲುಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸಂಬಂಧಪಟ್ಟ ಸಹಕಾರ ಸಂಘ/ ಸಹಕಾರ ಬ್ಯಾಂಕುಗಳಿಗೆ ಹಣ ಬಿಡುಗಡೆ ಮಾಡತಕ್ಕದ್ದು.

14. ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಪುನರ್ಭರಣ ಬಿಲ್ಲುಗಳು ಆಡಿಟ್ ಆದ ನಂತರ ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗದಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 187 ವೆಚ್ಚ–2/ 2011 ದಿನಾಂಕ: 06–06–2011ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1721

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ–ಸಾರ್ವಜನಿಕ ಬಹಿರಂಗ ಹರಾಜಿನಲ್ಲಿ ನಿವೇಶನ ಖರೀದಿಗಾಗಿ ಹೆಚ್ಚಿನ ಮೊತ್ತದ ಬಿಡ್ ದಾಖಲಿಸಿದ್ದ ಶ್ರೀ ಎಸ್.ಎಫ್. ಪಾಟೀಲ್ ಮತ್ತು ಶ್ರೀ ಎ.ಎ. ಸವಾರ ಇವರುಗಳು ಬಿಡ್ ಮಾಡಲಾಗಿದ್ದ ನಿವೇಶನಗಳಿಗೆ ಬದಲಾಗಿ ಪರ್ಯಾಯ ನಿವೇಶನವನ್ನು ನೀಡುವ ಬಗ್ಗೆ.

**ಓದಲಾಗಿದೆ :**
1) ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ, ಹುಬ್ಬಳ್ಳಿ ಇವರ ಪತ್ರ ಸಂಖ್ಯೆ ಹೆಚ್‌ಡಿಎಂಸಿ/61/12/202/2008–09, ದಿನಾಂಕ 10/2/2007 ಮತ್ತು 31/3/2009.
2) ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ, ಹುಬ್ಬಳ್ಳಿ ಇವರ ಪತ್ರ ಸಂಖ್ಯೆ ಹೆಚ್‌ಡಿಎಂಸಿ/61/12/206/2010–11, ದಿನಾಂಕ 16/8/2010.
3) ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ, ಹುಬ್ಬಳ್ಳಿ ಇವರ ಪತ್ರ ಸಂಖ್ಯೆ ಹೆಚ್‌ಡಿಎಂಸಿ/61/12/206/2011–12, ದಿನಾಂಕ 13/4/2011 ಮತ್ತು 3/5/2011.
4) ಸರ್ಕಾರದ ಆದೇಶ ಸಂಖ್ಯೆ: ನಅಇ 139 ಎಹೆಚ್‌ಡಿ 2004, ದಿನಾಂಕ 23/8/2004
5) ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ, ಹುಬ್ಬಳ್ಳಿಯ ಮಾನ್ಯ ಆಡಳಿತಾಧಿಕಾರಿಗಳ ಠರಾವು ಸಂಖ್ಯೆ: 138, ದಿನಾಂಕ 15/6/2007.
6) ಸರ್ಕಾರದ ಪತ್ರ ಸಂಖ್ಯೆ: ನಅಇ 22 ಎಹೆಚ್‌ಡಿ 2008, ದಿನಾಂಕ 14/10/2008.

**ಪ್ರಸ್ತಾವನೆ :**

ಮೇಲೆ (1) ರಿಂದ (3)ರಲ್ಲಿ ಓದಲಾದ ಪತ್ರಗಳಲ್ಲಿ ಆಯುಕ್ತರು, ಹುಬ್ಬಳ್ಳಿ– ಧಾರವಾಡ ಮಹಾನಗರಪಾಲಿಕೆ, ಹುಬ್ಬಳ್ಳಿ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಹುಬ್ಬಳ್ಳಿ– ಧಾರವಾಡ ಮಹಾನಗರಪಾಲಿಕೆಯ ಸಾರ್ವಜನಿಕ ಬಹಿರಂಗ ಹರಾಜಿನಲ್ಲಿ ನಿವೇಶನ ಖರೀದಿಗಾಗಿ ಹೆಚ್ಚಿನ ಮೊತ್ತದ ಬಿಡ್ ದಾಖಲಿಸಿದ್ದ ಶ್ರೀ ಎಸ್.ಎಫ್. ಪಾಟೀಲ್ ಮತ್ತು ಎ.ಎ. ಸವಾರ ಇವರುಗಳಿಗೆ ಬಿಡ್ ಮಾಡಲಾಗಿದ್ದ ನಿವೇಶನಗಳಿಗೆ ಬದಲಾಗಿ ಪರ್ಯಾಯ ನಿವೇಶನವನ್ನು ನೀಡಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

2) ಈ ಕುರಿತು ಪರಿಶೀಲಿಸಲಾಗಿ ಆಯುಕ್ತರು, ಹುಬ್ಬಳ್ಳಿ– ಧಾರವಾಡ ಮಹಾನಗರಪಾಲಿಕೆ ಇವರು ಸರ್ಕಾರಕ್ಕೆ ವರದಿ ಮಾಡಿರುವಂತೆ ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆಯ ವತಿಯಿಂದ 1987–88ರಲ್ಲಿ ಧಾರವಾಡ ವಿಭಾಗಕ್ಕೆ ಸೇರಿದ ಲಕಮನಹಳ್ಳಿಯಲ್ಲಿರುವ ಆರ್. ಎಸ್. ನಂ: 8/2 ರಲ್ಲಿನ ನಿವೇಶನಗಳನ್ನು ಜಾಹೀರ ಲೀಲಾವು ಮಾಡಲಾಗಿತ್ತು. ಲೀಲಾವಿನಲ್ಲಿ 2400 ಚದರ ಅಡಿಯ ನಿವೇಶನ ಸಂಖ್ಯೆ: 36 ಅನ್ನು ಶ್ರೀ ಎಸ್.ಎಫ್. ಪಾಟೀಲರವರು ರೂ. 32,600 ಕ್ಕೆ ಮತ್ತು 2400 ಚದರ ಅಡಿಯ ನಿವೇಶನ ಸಂಖ್ಯೆ : 37 ಅನ್ನು ಶ್ರೀ ಎ.ಎ. ಸವಾರ ಇವರು ರೂ. 45,000 ಹೆಚ್ಚಿನ ಮೊತ್ತದ ಬಿಡ್ ದಾಖಲಿಸಿ ಆ ಬಾಬ್ತು ಮಹಾನಗರಪಾಲಿಕೆಗೆ ಹಣ ಸಂದಾಯ ಮಾಡಲಾಗಿದೆ. ಈ ಸಂಬಂಧ ಸರ್ಕಾರದ ಆದೇಶ ಸಂಖ್ಯೆ: ನಅಇ 139 ಎಹೆಚ್‌ಡಿ 2004, ದಿನಾಂಕ 23/8/2004ರ ಕ್ರಮ ಸಂಖ್ಯೆ (7) ಮತ್ತು (10)ರಲ್ಲಿ ಖರೀದಿ ನೋಂದಣಿ ಮಾಡಿಕೊಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ನಂತರ ಈ ಎರಡು ನಿವೇಶನಗಳನ್ನು ಹುಬ್ಬಳ್ಳಿ–ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರದವರು ಉದ್ಯಾನವನವೆಂದು ಪರಿವರ್ತಿಸಿರುತ್ತಾರೆ. ಇದರಿಂದಾಗಿ ಇವರುಗಳಿಗೆ ಬಿಡ್ ಮಾಡಲಾದ ನಿವೇಶನಗಳನ್ನು ನೋಂದಾಯಿಸಿಕೊಟ್ಟಿರುವುದಿಲ್ಲ. ಈ ಕಾರಣದಿಂದಾಗಿ ಅವರಿಗೆ ಬಿಡ್ ಹಣ ವಾಪಸ್ ಪಡೆಯುವಂತೆ ತಿಳಿಸಲಾಗಿತು. ಆದರೆ ಅವರುಗಳು ಅದಕ್ಕೆ ಒಪ್ಪದೆ ಪರ್ಯಾಯ ನಿವೇಶನಕ್ಕಾಗಿ ಕೋರಿಕೆ ಸಲ್ಲಿಸಿದ್ದರು.

3) ಮೇಲೆ (5)ರಲ್ಲಿ ಓದಲಾದ ಅಂದಿನ ಆಡಳಿತಾಧಿಕಾರಿಗಳು, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ಇವರ ದಿನಾಂಕ 15/6/2007 ರ ಠರಾವು ಸಂಖ್ಯೆ: 138ರಲ್ಲಿ ಮೇಲೆ ಹೇಳಲಾದ ಅರ್ಜಿದಾರರಾದ ಶ್ರೀ ಎಸ್. ಎಫ್. ಪಾಟೀಲ ಮತ್ತು ಶ್ರೀ ಎ.ಎ. ಸವಾರ ಇವರುಗಳಿಗೆ ಪರ್ಯಾಯ ನಿವೇಶನ ಹಂಚಿಕೆ ಮಾಡಲು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಠರಾವು ಮಾಡಲಾಗಿತ್ತು. ಆದರೆ ಪರ್ಯಾಯವಾಗಿ ನಿವೇಶನಗಳನ್ನು ಮಂಜೂರು ಮಾಡುವುದು ಆಡಳಿತಾತ್ಮಕವಾಗಿ ಸಾಧ್ಯವಿಲ್ಲದ ಕಾರಣ ಈ ಪ್ರಕರಣಗಳಲ್ಲಿ ಸೂಕ್ತ ಪರಿಹಾರ ನೀಡುವಂತೆ ಸರ್ಕಾರದ ಹಂತದಲ್ಲಿ ತೀರ್ಮಾನವನ್ನು ಉಲ್ಲೇಖ (4) ರಲ್ಲಿ ಸೂಚಿಸಿರುವ ಪತ್ರದಲ್ಲಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ, ಹುಬ್ಬಳ್ಳಿ ಇವರಿಗೆ ತಿಳಿಸಲಾಗಿತ್ತು.

4) ಮೇಲ್ಕಂಡ ಅರ್ಜಿದಾರರುಗಳಾದ ಶ್ರೀ ಎಸ್.ಎಫ್. ಪಾಟೀಲ ಇವರ ಪರವಾಗಿ ಶ್ರೀ ಆರ್. ಎಸ್. ಪಾಟೀಲ ಮತ್ತು ಶ್ರೀ ಎ.ಎ. ಸವಾರ ಇವರುಗಳು ಮಾನ್ಯ ಕರ್ನಾಟಕ ವಿಧಾನ ಸಭೆಯ ಸಾರ್ವಜನಿಕ ಅರ್ಜಿ ಸಮಿತಿಗೆ ಅರ್ಜಿ ಸಲ್ಲಿಸಿ ಈಗಾಗಲೇ ಬಿಡ್ ಹಣವನ್ನು ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ, ಹುಬ್ಬಳ್ಳಿ ಇವರಿಗೆ ಪಾವತಿಸಿರುವುದರಿಂದ ಹಾಗೂ ಬಿಡ್ ಮಾಡಿರುವ ನಿವೇಶವನ್ನು ಅವರುಗಳಿಗೆ ನೋಂದಾಯಿಸಿ ಕೊಡಲು ಸಾಧ್ಯವಾಗದ ಕಾರಣ ಅವರುಗಳಿಗೆ ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆಯಿಂದ ಪರ್ಯಾಯ ನಿವೇಶನವನ್ನು ನೀಡುವಂತೆ ಕೋರಿರುತ್ತಾರೆ.

ಅರ್ಜಿದಾರರುಗಳ ಮನವಿಗಳನ್ನು ಪರಿಶೀಲಿಸಿದ ಕರ್ನಾಟಕ ವಿಧಾನ ಸಭೆ ಸಾರ್ವಜನಿಕ ಅರ್ಜಿ ಸಮಿತಿಯು ಅರ್ಜಿದಾರರುಗಳ ಕೋರಿಕೆಯು ಸಮಂಜಸವಾಗಿದ್ದು ಅವರುಗಳಿಗೆ ಪರ್ಯಾಯ ನಿವೇಶನ ನೀಡುವಂತೆ ತನ್ನ ದಿನಾಂಕ 18/11/2010 ರ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತದೆ.

5) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಸೆಕ್ಷನ್ 176 ಅಡಿ ಮತ್ತು ರಾಜ್ಯದಲ್ಲಿನ ನಗರ ಸ್ಥಳೀಯ ಸಂಸ್ಥೆಗಳ ಜಮೀನುಗಳನ್ನು ವಿಲೇವಾರಿ ಮಾಡುವ ಬಗ್ಗೆ ಹೊರಡಿಸಲಾಗಿರುವ ದಿನಾಂಕ 2/6/2003 ರ ಸರ್ಕಾರದ ಆದೇಶ ಸಂಖ್ಯೆ: ನಅಇ 129 ಟಿಎಂಡಿ 2002ರ ಪ್ರಕಾರ ಈ ರೀತಿ ನಿವೇಶನಗಳನ್ನು ಮಂಜೂರಾತಿ ಮಾಡಲು ಅವಕಾಶ ಇರುವುದಿಲ್ಲ. ಬದಲಾಗಿ ಯಾವುದೇ ನಿವೇಶನಗಳನ್ನು ಸಾರ್ವಜನಿಕ ಬಹಿರಂಗ ಹರಾಜು ಮೂಲಕವೇ ಮಾರಾಟ ಮಾಡಬಹುದಾಗಿರುತ್ತದೆ.

6) ಮೇಲಿನ ಅಂಶಗಳನ್ನು ಪರಿಶೀಲಿಸಿ ಸದರಿ ಪ್ರಕರಣವನ್ನು ಪೂರ್ವ ನಿದರ್ಶನವಲ್ಲದ ವಿಶೇಷ ಪ್ರಕರಣವೆಂದು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 98 ಎಹೆಚ್‌ಡಿ 2010, ಬೆಂಗಳೂರು, ದಿನಾಂಕ : 13–06–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

1) ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ವತಿಯಿಂದ 1987–88ರಲ್ಲಿ ಧಾರವಾಡ ವಿಭಾಗಕ್ಕೆ ಸೇರಿದ ಲಕಮನಹಳ್ಳಿಯಲ್ಲಿರುವ ಆರ್. ಎಸ್. ನಂ: 8/2 ರಲ್ಲಿ ಸಾರ್ವಜನಿಕ ಬಹಿರಂಗ ಹರಾಜಿನಲ್ಲಿ 2400 ಚದರ ಅಡಿಯ ವಿಸ್ತೀರ್ಣದ ನಿವೇಶನ ಸಂಖ್ಯೆ: 36 ಅನ್ನು ಖರೀದಿಸುವ ಸಲುವಾಗಿ ಹೆಚ್ಚಿನ ಬಿಡ್ ಮೊತ್ತ ರೂ. 32,600/– ದಾಖಲಿಸಿ ನಂತರ ಹಣ ಪಾವತಿಸಿದ್ದ ಶ್ರೀ ಎಸ್.ಎಫ್. ಪಾಟೀಲರವರು ಈಗಾಗಲೇ ನಿಧನರಾಗಿರುವುದರಿಂದ ಅವರ ಪರವಾಗಿ ಹಕ್ಕುಳ್ಳ ವಾರಸುದಾರರಿಗೆ ಬಿಡ್ ಮೊತ್ತಕ್ಕೆ ಬದಲಾಗಿ ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ವತಿಯಿಂದ 2400 ಚದರ ಅಡಿ ನಿವೇಶನವನ್ನು ಹಂಚಿಕೆ ಮಾಡುವುದು.

2) ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ವತಿಯಿಂದ 1987–88ರಲ್ಲಿ ಧಾರವಾಡ ವಿಭಾಗಕ್ಕೆ ಸೇರಿದ ಲಕಮನಹಳ್ಳಿಯಲ್ಲಿರುವ ಆರ್. ಎಸ್. ನಂ: 8/2 ರಲ್ಲಿ ಸಾರ್ವಜನಿಕ ಬಹಿರಂಗ ಹರಾಜಿನಲ್ಲಿ 2400 ಚದರ ಅಡಿಯ ವಿಸ್ತೀರ್ಣದ ನಿವೇಶನ ಸಂಖ್ಯೆ: 37 ಅನ್ನು ಖರೀದಿಸುವ ಸಲುವಾಗಿ ಹೆಚ್ಚಿನ ಬಿಡ್ ಮೊತ್ತ ರೂ. 45,000/– ದಾಖಲಿಸಿ ನಂತರ ಹಣ ಪಾವತಿಸಿದ್ದ ಶ್ರೀ ಎ.ಎ. ಸವಾರರವರಿಗೆ ಬಿಡ್ ಮೊತ್ತಕ್ಕೆ ಬದಲಾಗಿ ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ವತಿಯಿಂದ 2400 ಚದರ ಅಡಿ ನಿವೇಶನವನ್ನು ಹಂಚಿಕೆ ಮಾಡುವುದು

2. ಶ್ರೀ ಎಸ್.ಎಫ್. ಪಾಟೀಲರ ಹೆಸರಿನಲ್ಲಿ ನೀಡುವ ನಿವೇಶನವನ್ನು ಪಡೆಯುವವರು ಅವರ ಪರವಾಗಿ ಕಾನೂನುಬದ್ಧ ಹಕ್ಕು ಹೊಂದಿರುವ ವಾರಸುದಾರರಾಗಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು.

3) ಸಾರ್ವಜನಿಕ ಬಹಿರಂಗ ಹರಾಜಿನಲ್ಲಿ ಹೇಳಲಾದ ಷರತ್ತುಗಳನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಆರ್. ಮಹೇಶ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
(ಮಹಾನಗರಪಾಲಿಕೆ–2), ನಗರಾಭಿವೃದ್ಧಿ ಇಲಾಖೆ

ಪಿ.ಆರ್. 1722

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದ ಸ್ವಸಹಾಯ ಗುಂಪುಗಳಿಗೆ ಪತ್ತಿನ ಸಹಕಾರಿ ಸಂಸ್ಥೆಗಳ ಮೂಲಕ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯಡಿಯಲ್ಲಿ 2009–10 ಮತ್ತು 2010–11ನೆ ವರ್ಷಗಳಿಗೆ ಬಡ್ಡಿ ಸಹಾಯಧನ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಒ 68 ಸಿಎಲ್‌ಎಸ್ 2007, ದಿನಾಂಕ: 02–06–2007.
2. ಸರ್ಕಾರಿ ಅದೇಶ ಸಂಖ್ಯೆ: ಸಿಒ 68 ಸಿಎಲ್‌ಎಸ್ 2007, ದಿನಾಂಕ: 23–01–2008.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಆದೇಶದಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲಗಳನ್ನು ಕೆಲವು ಷರತ್ತುಗಳಿಗೊಳಪಟ್ಟು ಒದಗಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ ಓದಲಾದ (2)ರ ಆದೇಶದ ಮೇರೆಗೆ ಸರ್ಕಾರದ ವತಿಯಿಂದ ಭರಿಸಿಕೊಡುವ ಬಡ್ಡಿ ದರಗಳನ್ನು ಪರಿಷ್ಕರಿಸಿ ಆದೇಶಿಸಲಾಗಿದೆ. ತದನಂತರ, ಸರ್ಕಾರವು ಭರಿಸಿಕೊಡುವ ಸಹಾಯಧನ ಕುರಿತು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ 2009–10 ಹಾಗೂ 2010–11ನೇ ವರ್ಷಗಳಿಗೆ ಸರ್ಕಾರದ ವತಿಯಿಂದ ನೀಡಬೇಕಾದ ಬಡ್ಡಿ ಸಹಾಯಧನ ಕುರಿತು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 311 ಸಿಎಲ್‌ಎಸ್ 2011, ಬೆಂಗಳೂರು, ದಿನಾಂಕ: 06–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ 2009–10 ಮತ್ತು 2010–11ನೇ ವರ್ಷಗಳಲ್ಲಿ ಶೇಕಡಾ 4ರ ಬಡ್ಡಿ ದರದಲ್ಲಿ ನೀಡಿದ ಸಾಲಗಳಿಗೆ ಈ ಕೆಳಗಿನಂತೆ ಬಡ್ಡಿ ಸಹಾಯಧನವನ್ನು ಸರ್ಕಾರವು ಒದಗಿಸುತ್ತದೆ.

1. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಸ್ವಸಹಾಯ ಗುಂಪುಗಳಿಗೆ ಒದಗಿಸಿದ ಸಾಲಗಳ ಮೇಲೆ ಶೇಕಡಾ 9ರಷ್ಟು.
2. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ನೇರವಾಗಿ ಸ್ವಸಹಾಯ ಗುಂಪುಗಳಿಗೆ ಒದಗಿಸಿದ ಸಾಲಗಳ ಮೇಲೆ ಶೇಕಡಾ 7.5ರಷ್ಟು.

ದಿನಾಂಕ: 02–06–2007 ಮತ್ತು ದಿನಾಂಕ: 23–01–2008ರ ಆದೇಶದಲ್ಲಿ ವಿಧಿಸಿರುವ ಉಳಿದ ಷರತ್ತುಗಳು ಮುಂದುವರಿಯುತ್ತವೆ. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 224 ವೆಚ್ಚ–02/2011, ದಿನಾಂಕ: 01–06–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿಆರ್.ನಂ. 1723

## ಸಹಕಾರ ಸಚಿವಾಲಯ

**ವಿಷಯ :** ಅಖಿಲ ಕರ್ನಾಟಕದ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಇ 36 ಸಸಂನೋ 2010 ದಿನಾಂಕ: 25–05–2010.
2. ರಾಜ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 19791/2010 ದಿನಾಂಕ: 31–08–2010 ರ ಆದೇಶ.
3. ಸರ್ಕಾರದ ಆದೇಶ ಸಂಖ್ಯೆ: ಸಇ 36 ಸಸಂನೋ 2010 ದಿನಾಂಕ: 15–02–2011 ಮತ್ತು ತಿದ್ದುಪಡಿ ಆದೇಶ ದಿನಾಂಕ: 24–02–2011.
4. ಶ್ರೀ ಎಂ.ಪಿ. ಮಂಜುನಾಥ, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ನಿಬಂಧಕರ ಕಛೇರಿ ಬೆಂಗಳೂರು–52 ಹಾಗೂ ಆಡಳಿತಾಧಿಕಾರಿಗಳು, ಅಖಿಲ ಕರ್ನಾಟಕ ಗಾಣಿಗರ ಸಂಘ, ಬೆಂಗಳೂರು ಇವರು ಸರ್ಕಾರಕ್ಕೆ ಬರೆದಿರುವ ದಿನಾಂಕ: 20–05–2011ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ದಿನಾಂಕ: 25–05–2010ರ ಆದೇಶದಲ್ಲಿ, ಅಖಿಲ ಕರ್ನಾಟಕದ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 1ನೇ ವೃತ್ತ ಇವರನ್ನು ಆಡಳಿತಾಧಿಕಾರಿಯಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆದೇಶಿಸಲಾಗಿತ್ತು. ಸರ್ಕಾರದ ಆದೇಶದಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಿನಾಂಕ: 31–05–2010 ರಂದು ಸಂಘದ ಆಡಳಿತಾಧಿಕಾರಿಯಾಗಿ ಪ್ರಭಾರ ವಹಿಸಿಕೊಂಡಿರುತ್ತಾರೆ.

ಸರ್ಕಾರದ ದಿನಾಂಕ: 25–05–2010 ರ ಆದೇಶವನ್ನು ಪ್ರಶ್ನಿಸಿ ಅಖಿಲ ಕರ್ನಾಟಕ ಗಾಣಿಗರ ಸಂಘ (ರಿ), ಬೆಂಗಳೂರು ಇದರ ಅಧ್ಯಕ್ಷರಾದ ಶ್ರೀ ಎನ್. ಶ್ರೀನಿವಾಸ್ ರವರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 19791/2010 ನ್ನು ದಾಖಲಿಸಿದ್ದು, ಸದರಿ ರಿಟ್ ಅರ್ಜಿಯನ್ನು ನ್ಯಾಯಾಲಯವು ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಂತೆ ದಿನಾಂಕ: 31–08–2010 ರಂದು ತೀರ್ಪು ನೀಡಿರುತ್ತಾರೆ. ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ: 15–02–2011ರ ಆದೇಶದಲ್ಲಿ, ಸಂಘಕ್ಕೆ ನೇಮಕವಾದ ಆಡಳಿತಾಧಿಕಾರಿಗಳವಧಿಯನ್ನು ಮೂರು ತಿಂಗಳ ಅವಧಿಗೆ ಮುಂದುವರೆಸಿ, ಸಂಘದ ಆಡಳಿತ ಸಮಿತಿಗೆ ಕಾನೂನಿಗನುಗುಣವಾಗಿ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ ಹಾಗೂ ಆಡಳಿತಾಧಿಕಾರಿಗಳು ಮುಂದುವರೆಸಿದ ಮೂರು ತಿಂಗಳ ಅವಧಿಯಲ್ಲಿ ಜಿಲ್ಲಾ ನೋಂದಾಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರು ಸಂಘದ ಕಾರ್ಯಚಟುವಟಿಕೆಗಳ ಬಗ್ಗೆ ಗಮನಹರಿಸಿ ಸರ್ಕಾರಕ್ಕೆ ವರದಿ ಸಲ್ಲಿಸಲು ಸಹ ಸೂಚಿಸಲಾಗಿರುತ್ತದೆ. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ದಿನಾಂಕ: 24–02–2011ರ ತಿದ್ದುಪಡಿ ಆದೇಶದಲ್ಲಿ ಶ್ರೀ ಎಂ.ಪಿ. ಮಂಜುನಾಥ್, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿತ್ರದುರ್ಗ ಉಪ ವಿಭಾಗ ಹಾಲಿ ನಿಯೋಜನೆ ಮೇಲೆ ಸಹಕಾರ ಸಂಘಗಳ ನಿಬಂಧಕರ ಕಛೇರಿ (ಕಾನೂನು ಕೋಶ), ಬೆಂಗಳೂರು ಇವರನ್ನು ಅಡಳಿತಾಧಿಕಾರಿಯನ್ನಾಗಿ ಮೂರು ತಿಂಗಳ ಅವಧಿಗೆ ಮುಂದುವರೆಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ದಿನಾಂಕ: 20–05–2011ರ ಪತ್ರದಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು–52 ಹಾಗೂ ಆಡಳಿತಾಧಿಕಾರಿಗಳು, ಅಖಿಲ ಕರ್ನಾಟಕ ಗಾಣಿಗರ ಸಂಘ, ಬೆಂಗಳೂರು ರವರು ಅಖಿಲ ಕರ್ನಾಟಕ ಗಾಣಿಗರ ಸಂಘ, ಬೆಂಗಳೂರು ಈ ಸಂಘದ ಹಿಂದಿನ ಆಡಳಿತಾಧಿಕಾರಿಗಳಿಂದ ದಿನಾಂಕ: 28–02–2011 ರಂದು ಅಧಿಕಾರ ವಹಿಸಿಕೊಂಡಿದ್ದು, ಹಿಂದಿನ ಆಡಳಿತಾಧಿಕಾರಿಗಳು ಸಂಘದ ಯಾವುದೇ ದಾಖಲೆಗಳನ್ನು ಅವರ ವಶಕ್ಕೆ ನೀಡಿಲ್ಲವೆಂದು ಹಾಗೂ ಅವರು ಅಧಿಕಾರ ವಹಿಸಿಕೊಂಡ ನಂತರ ಸಂಘದ ವಿಳಾಸಕ್ಕೆ ವಿವಿಧ ದಿನಾಂಕಗಳಂದು ಭೇಟಿ ನೀಡಿದ್ದು, ಆ ಸ್ಥಳದಲ್ಲಿ ಸಂಘದ ಸಿಬ್ಬಂದಿ ಅಥವಾ ಹಿಂದಿನ ಪದಾಧಿಕಾರಿಗಳು ಇರಲಿಲ್ಲ. ಈ ದಿಸೆಯಲ್ಲಿ ದಾಖಲೆಗಳನ್ನು ನೀಡುವಂತೆ ಕೋರಿ ವಿವಿಧ ದಿನಾಂಕಗಳಂದು ಲಿಖಿತ ರೂಪದಲ್ಲಿ ಸಂಘಕ್ಕೆ ಪತ್ರ ಬರೆದಿದ್ದು, ಹಾಗೂ ಈ ಬಗ್ಗೆ ಅಂದಿನ ಸಂಘಗಳ ನೋಂದಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರ ಗಮನಕ್ಕೆ ತಂದು ಮುಂದಿನ ನಿರ್ದೇಶನ ನೀಡಲು ಕೋರಲಾಗಿದೆ. ಆಡಳಿತಾಧಿಕಾರಿಗಳು ದಿನಾಂಕ: 28–04–2011 ರಂದು ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಉತ್ತರ ವಲಯ ಇವರ ಕಛೇರಿಯ ಸಿಬ್ಬಂದಿಯೊಂದಿಗೆ ಸಂಘದ ಸ್ಥಳಕ್ಕೆ ಭೇಟಿ ಮಾಡಿ ಸಂಘದ ಸ್ಥಳದ ಮಹಜರು ವರದಿಯನ್ನು ಪಡೆದಿದ್ದು, ಆದಾಗ್ಯೂ ಸಂಘದ ದಾಖಲೆಗಳು ಸಿಕ್ಕಿರುವುದಿಲ್ಲ. ಮೇಲೆ ತಿಳಿಸಿರುವ ಕಾರಣದ ಹಿನ್ನಲೆಯಲ್ಲಿ ಸಂಘದ ಪದಾಧಿಕಾರಿಗಳು ದಾಖಲಾತಿಗಳನ್ನು ನೀಡದಿರುವ ಕಾರಣ ಮೂರು ತಿಂಗಳೊಳಗೆ ಹೊಸ ಆಡಳಿತ ಮಂಡಳಿಗೆ ಚುನಾವಣೆ ಜರುಗಿಸಲು ಸಾಧ್ಯವಾಗಿರುವುದಿಲ್ಲ ಮತ್ತು ಈ ಎಲ್ಲಾ ಅಂಶಗಳನ್ನು ಸರ್ಕಾರ ಹಾಗೂ ಸಕ್ಷಮ ಪ್ರಾಧಿಕಾರಿಗಳಿಗೆ ಕಾಲಕಾಲಕ್ಕೆ ವರದಿ ಮಾಡಿರುವುದನ್ನು ಸರ್ಕಾರದ ಅವಗಾಹನೆಗೆ ತರುತ್ತಾ ಆಡಳಿತಾಧಿಕಾರಿಗಳ ಅಧಿಕಾರಾವಧಿಯನ್ನು ವಿಸ್ತರಿಸಲು ಸೂಕ್ತ ಕ್ರಮ ಕೈಗೊಳ್ಳುವಂತೆ ವಿನಂತಿಸಿರುತ್ತಾರೆ.

ಆಡಳಿತಾಧಿಕಾರಿಗಳು ಸರ್ಕಾರಕ್ಕೆ ಬರೆದಿರುವ ಪತ್ರವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಅಖಿಲ ಕರ್ನಾಟಕ ಗಾಣಿಗರ ಸಂಘ, ಬೆಂಗಳೂರು ಈ ಸಂಸ್ಥೆಗೆ ನೇಮಿಸಿರುವ ಆಡಳಿತಾಧಿಕಾರಿಗಳ ಅವಧಿಯನ್ನು ಕೊನೆಯದಾಗಿ ಆರು ತಿಂಗಳ ಅವಧಿಗೆ ಮುಂದುವರೆಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 120 ನ್ಯಾದಾಅ 2010, ಬೆಂಗಳೂರು, ದಿನಾಂಕ: 16ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಖಿಲ ಕರ್ನಾಟಕದ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಶ್ರೀ ಎಂ.ಪಿ. ಮಂಜುನಾಥ್, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು–52 ಇವರ ಆಡಳಿತಾಧಿಕಾರಿ ಅವಧಿಯನ್ನು ಕೊನೆಯದಾಗಿ ದಿನಾಂಕ: 24–05–2011 ರಿಂದ ಮತ್ತೆ ಆರು (6) ತಿಂಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಹಾಗೂ ಜಿಲ್ಲಾ ನೋಂದಾಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ರವರಿಗೂ ಮಾಹಿತಿಯನ್ನು ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಂಜುಂಡಪ್ಪ**

ಪಿಆರ್.ನಂ. 1724

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

## ENERGY SECRETARIAT

**Sub:** Transfer of Commissioned 0.25 MW Wind Power Capacity in favour of Mr. G. Venkanna - reg.

Read:
1. Government Order No.: DE 49 NCE 2006 dated: 20-04-2006.
2. Government Order No.: EN 98 NCE 2007 dated: 12-03-2007.
3. Government Order No.: EN 249 NCE 2008 dated: 20-12-2008.
4. Government Order No.: EN 28 NCE 2010 dated: 17-02-2010.
5. Letter No. KRED/08/G. Venkanna-GNC(HUF)-0.25 MW/2011/1579 02/04-06-2011 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order read at (1) above, approval has been accorded for implementation of 5 MW capacity Wind Power Project at Gadag District to M/s Renewable Energy Consultancy.

In the Government Order read at (2) above, approval has been accorded for transfer of 0.25 MW wind power capacity in favour of M/s Fasteners and Allied Products (P) Ltd. from M/s Renewable Energy Consultancy at Sirunj village, Gadag Taluk & District.

In the Government Order read at (3) above, sanction has been accorded for enhancement of wind power capacity from 5.00 MW to 9.00 MW in favour of M/s Renewable Energy Consultancy at Sirunj, Shirol & Yelisirur villages of Gadag Taluk & District.

In the Government Order read at (4) above, Government accords approval for transfer of commissioned 0.25 MW wind power capacity in favour of M/s G.N. Chandu (HUF) from M/s Fasteners and Allied Products (P) Ltd. at Sirunj village, Gadag Taluk & District.

In the letter read at (5) above, the Managing Director, Karnataka Renewable Energy Development Limited, Bangalore has recommended for transfer of Commissioned 0.25 MW Wind Power capacity at Sirunj, Gadag Taluk, Gadag District in favour of Mr. G. Venkanna possessed by M/s. G.N. Chandu (HUF).

The proposal has been examined in detail and hence the following order:-

**GOVERNMENT ORDER NO.: EN 257 NCE 2011, BANGALORE, DATED, 18-06-2011**

Governnment is pleased to accord approval for transfer of Commissioned 0.25 MW Wind Power capacity at Sirunj, Gadag Taluk, Gadag District in favour of Mr. G. Venkanna possessed by M/s G.N. Chandu (HUF) as detailed below:-

| Village Name | Taluk/District | Extent (Acres) | Survey No. | No. of WTG's | Capacity Commissioned in MW |
|---|---|---|---|---|---|
| Sirunj | Gadag | 1.0 | 17 | 1 No. of 250 kw | 0.25 |

1. Mr. G. Venkanna shall execute an agreement with Government within 45 (forty five) days from the date of issue of this Order.
2. Mr. G. Venkanna is permitted to have to PPA transferred in his favour with suitable amendment and to continue the same tariff as it was applicable at the time of commissioning of plant.
3. The Government reserves the right to Cancle/modify this Order.

The terms and conditions of the Government Order read at (1) above shall IPSO FACTO applicable.

By Order and in the name of Governor of Karnataka

**Suresh B. Krishnappanavar**

PR. No. 1725

Under Secretary to Government

Energy Department

## ENERGY SECRETARIAT

**Sub:** Transfer of Commissioned 0.25 MW Wind Power Capacity in favour of Mr. G. Sudarshan - reg.

Read:
1. Government Order No.: EN 49 NCE 2006 dated: 20-04-2006.
2. Government Order No.: EN 249 NCE 2008 dated: 20-12-2008.
3. Government Order No.: EN 249 NCE 2009 dated: 25-03-2009.
4. Letter No. KRED/08/G. Sudarshan-CFHRCPL-0.25 MW/2011 1580 dated 02/04-06-2011 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order read at (1) above, sanction was accorded for implementation of 5.00 MW capacity Wind Power, Project at Shirunj, Shirol, Yelisirur Villages of Gadag District to M/s Renewable Energy Consultancy.

In the Government Order read at (2) above, sanction has been accorded for enhancement of wind power capacity from 5.00 MW to 9.00 MW in favour of M/s Renewable Energy Consultancy at Shirunj, Shirol, Yelisirur Villages of Gadag District.

In the Government Order read at (3) above, Government accords approval for transfer of 0.25 MW Wind Power capacity in favour of M/s Chandama Farm & Horticulture Research Centre Pvt. Ltd. from out of the 9.00 MW sanctioned capacity from M/s Renewable Energy Consultancy at Enam Venkatapura area of Shirunj and Yelisur villages of Gadag District.

In the Letter read at (4) above, the Managing Director, Karnataka Renewable Energy Development Limited, Bangalore has recommended for transfer of Commissioned 0.25 MW Wind Power capacity at Sirunj, Yelisur, Gadag Taluk, Gadag District in favour of Mr. G. Sudarshan possessed by M/s. Chandama Farm & Horticulture Research Centre Pvt. Ltd.

The proposal has been examined in detail and hence the following order:-

**GOVERNMENT ORDER NO.: EN 258 NCE 2011, BANGALORE, DATED, 18-06-2011**

Governnment is pleased to accord approval for transfer of Commissioned 0.25 MW Wind Power capacity at Sirunj, Yelisur, Gadag Taluk, Gadag District in favour of Mr. G. Sudarshan possessed by M/s Chandama Farm & Horticulture Research Centre Pvt. Ltd. as detailed below:-

| Village Name | Taluk/District | Extent (Acres | Survey No. | No. of WTG's | Capacity Commissioned in MW | Wind Turbine Generator Location No. |
|---|---|---|---|---|---|---|
| Sirunj, Yelisur | Gadag | 1.0 | 26 | 1 No. of 250 kw | 0.25 | KAB 07 |

1. Mr. G. Sudarshan shall execute an agreement with Government within 45 (forty five) days from the date of issue of this Order.
2. Mr. G. Sudarshan is permitted to have to PPA transferred in his favour with suitable amendment and to continue the same tariff as it was applicable at the time of commissioning of plant.
3. The Government reserves the right to Cancle/modify this Order.

The terms and conditions of the Government Order read at (1) above shall IPSO FACTO applicable.

By Order and in the name of Governor of Karnataka
**Suresh B. Krishnappanavar**
Under Secretary to Government
Energy Department

PR. No. 1726

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ರೈಲು ಮಾರ್ಗದ ಮಧ್ಯದಲ್ಲಿ ಬರುವ ಎಲ್.ಸಿ. ಸಂ. 83 ಹಾಗೂ ನಗರದ ಮದರ್ ಥೆರೇಸಾ ಶಾಲೆ ಹತ್ತಿರ ರಸ್ತೆ ಕೆಳಸೇತುವೆ/ಮೇಲು ಸೇತುವೆ ನಿರ್ಮಾಣದ ಜಿ.ಎ.ಡಿ. ತಯಾರಿಸಲು ಅಂದಾಜು ಮೊತ್ತದ ಶೇಕಡ 2 ರಷ್ಟು ಪಿ ಅಂಡ್ ಇ ವೆಚ್ಚವನ್ನು ಭರಿಸಲು ಹಣ ಬಿಡುಗಡೆ.

**ಓದಲಾಗಿದೆ :** ದಿನಾಂಕ: 30–05–2011 ಸಂ. ಕಂ: ಭೂಸ್ವಾ:63:2010–11ರ ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರ.

**ಪ್ರಸ್ತಾವನೆ:**

1. ಗುಲ್ಬರ್ಗಾ ಜಿಲ್ಲೆಯ ರೈಲು ಮಾರ್ಗದ ಮಧ್ಯದಲ್ಲಿ ಬರುವ ಎಲ್.ಸಿ. ಸಂ. 83 ರಲ್ಲಿ ರಸ್ತೆ ಮೇಲು ಸೇತುವೆ ಹಾಗೂ ನಗರದ ಮದರ್ ಥೆರೇಸಾ ಶಾಲೆ ಹತ್ತಿರ ರಸ್ತೆ ಕೆಳಸೇತುವೆ ನಿರ್ಮಾಣದ ಕಾಮಗಾರಿಯು ಸೋಲಾಪುರದ ಕೇಂದ್ರ ರೈಲ್ವೇ ವ್ಯಾಪ್ತಿಗೆ ಬರುವುದರಿಂದ ಸದರಿ ಮಾರ್ಗಗಳಲ್ಲಿ ರಸ್ತೆ ಮೇಲು/ಕೆಳ ಸೇತುವೆ ನಿರ್ಮಿಸಲು ಗುಲ್ಬರ್ಗಾ ಜಿಲ್ಲಾಧಿಕಾರಿಗಳು ವಿಭಾಗೀಯ ವ್ಯವಸ್ಥಾಪಕರು ಕೇಂದ್ರ ರೈಲ್ವೇ ಸೋಲಾಪುರ, ಇವರನ್ನು ಕೋರಲಾಗಿದ್ದು ಸದರಿ ಮಾರ್ಗದಲ್ಲಿ ಕಾಮಗಾರಿಯನ್ನು ಕೈಗೊಳ್ಳಲು ಮೊದಲು ಜಿ.ಎ.ಡಿ. ತಯಾರಿಸಬೇಕಾಗಿರುವುದರಿಂದ ಅದಕ್ಕೆ ಅಂದಾಜು ಮೊತ್ತ ರೂ. 14.65 ಕೋಟಿಗಳ ಅಂದಾಜಿನ ಶೇಕಡ 2 ರಷ್ಟು ಪಿ ಅಂಡ್ ಇ ವೆಚ್ಚವನ್ನು ಭರಿಸಿದಲ್ಲಿ ಜಿ.ಎ.ಡಿ.ಯನ್ನು ತಯಾರಿಸಲು ಕ್ರಮ ಕೈಗೊಳ್ಳಲಾಗುವುದೆಂದು ಹಾಗೂ ಕೋರಿರುವುದರಿಂದ ಅಂದಾಜು ಮೊತ್ತದ ರೂ. 28,67,628/– ಗಳ ಪಿ ಅಂಡ್ ಇ ವೆಚ್ಚವನ್ನು ಬಿಡುಗಡೆ ಮಾಡಬೇಕೆಂದು ಜಿಲ್ಲಾಧಿಕಾರಿಗಳು ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಿರುತ್ತಾರೆ.

2. ಈ ಅಂಶಗಳೆಲ್ಲವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 64 ರಾರಾಹೆ 2009, ಬೆಂಗಳೂರು, ದಿನಾಂಕ: 20–06–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಜಿಲ್ಲೆಯ ರೈಲು ಮಾರ್ಗದ ಮಧ್ಯದಲ್ಲಿ ಬರುವ ಎಲ್.ಸಿ. ಸಂ.: 83 ಹಾಗೂ ನಗರದ ಮದರ್ ಥೆರೇಸಾ ಶಾಲೆ ಹತ್ತಿರ ರಸ್ತೆ ಕೆಳಸೇತುವೆ/ಮೇಲು ಸೇತುವೆ ನಿರ್ಮಾಣದ ಒಟ್ಟು ಅಂದಾಜು ರೂ. 14.65 ಕೋಟಿಗಳ ಮೊತ್ತಕ್ಕೆ ಜಿ.ಎ.ಡಿ.ಯನ್ನು ತಯಾರಿಸಲು ಅಂದಾಜು ಮೊತ್ತದ ಶೇಕಡ 2 ರಷ್ಟು ಪಿ ಅಂಡ್ ಇ ವೆಚ್ಚವನ್ನು ಭರಿಸಲು ರೂ. 28,67, 628/– (ರೂಪಾಯಿ ಇಪ್ಪತ್ತೆಂಟು ಲಕ್ಷ ಅರವತ್ತೇಳು ಸಾವಿರ ಆರು ನೂರ ಇಪ್ಪತ್ತೆಂಟು ಮಾತ್ರ) ಗಳ ಮೊತ್ತವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ **"5465–01–190–3–04–(ಯೋಜನೆ)–211–ಕೆ–ರೈಡ್/ಆರ್‌ಓಬಿ/ಆರ್‌ಯುಬಿ/ಬಂಡವಾಳ"** ಇದರಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 21.49 ಕೋಟಿಗಳಿಂದ ಬಿಡುಗಡೆ ಮಾಡಲಾಗಿದೆ.

2. ಈ ಹಣವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರು ಜಿಲ್ಲಾ ಖಜಾನೆ ಗುಲ್ಬರ್ಗಾ ಇಲ್ಲಿ ಡ್ರಾ ಮಾಡಲು ಅಧೀಕರಿಸಿದೆ. ಉಪ ನಿರ್ದೇಶಕರು, ಎನ್.ಎಂ.ಸಿ, ಇವರು ಈ ಮೊತ್ತವನ್ನು ಜಿಲ್ಲಾಧಿಕಾರಿಗಳ ಖಾತೆಗೆ ಅಪ್‌ಲೋಡ್ ಮಾಡುವುದು. ಈ ಹಣವನ್ನು ಯೋಜನೆಗೆ ವೆಚ್ಚ ಮಾಡಿ ಉಪಯೋಗಿತಾ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿಗಳು ಸಲ್ಲಿಸತಕ್ಕದ್ದು.

3. ಈ ಆದೇಶವನ್ನು ದಿನಾಂಕ: 16-05-2008 ಸಂಖ್ಯೆ: ಎಫ್‌ಡಿ ಐಟಿಎಫ್‌ಪಿ 2008 ಸರ್ಕಾರಿ ಆದೇಶದಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಇಲಾಖೆ

ಪಿಆರ್.ನಂ. 1727

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** 13ನೇ ಆರ್ಥಿಕ ಆಯೋಗದ ಶಿಫಾರಸ್ಸಿನ ಅಡಿಯಲ್ಲಿ ಕೋರ್ಟ್ ಮ್ಯಾನೇಜರ್ ಹಾಗೂ ಸಿಬ್ಬಂದಿಯ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ಮಹಾವಿಲೇಖನಾಧಿಕಾರಿ, ಕರ್ನಾಟಕ ಉಚ್ಚ ನ್ಯಾಯಾಲಯ ಇವರ ಪತ್ರದ ಸಂಖ್ಯೆ : ಆರ್‌ಪಿಎಸ್ 58/2010 (ಹೆಚ್‌ಸಿಬಿ), ದಿನಾಂಕ 11-03-2011.

**ಪ್ರಸ್ತಾವನೆ :**

ಮಹಾವಿಲೇಖನಾಧಿಕಾರಿ, ಕರ್ನಾಟಕ ಉಚ್ಚ ನ್ಯಾಯಾಲಯ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ 13ನೇ ಆರ್ಥಿಕ ಆಯೋಗದ ಅಡಿಯಲ್ಲಿ ಒದಗಿಸಲಾದ ಅನುದಾನಕ್ಕೆ ಕಾರ್ಯ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ ರಾಜ್ಯದಲ್ಲಿ ಒಟ್ಟು 34 ಕೋರ್ಟ್ ಮ್ಯಾನೇಜರ್ ಹುದ್ದೆಗಳು ಅದರ ಜೊತೆಗೆ 136 ಸಹಾಯಕ ಹುದ್ದೆಗಳನ್ನು ಅಂದರೆ ಕರ್ನಾಟಕ ಉಚ್ಚ ನ್ಯಾಯಾಲಯದ ಪ್ರಧಾನ ಶಾಖೆಗಳಿಗೆ 2 ಹಾಗೂ ಧಾರವಾಡ ಮತ್ತು ಗುಲ್ಬರ್ಗ ಉಚ್ಚ ನ್ಯಾಯಾಲಯದ ಸಂಚಾರಿ ನ್ಯಾಯಪೀಠಕ್ಕೆ ಒಂದೊಂದು ಮತ್ತು ರಾಜ್ಯದ ಪ್ರತಿ ಜಿಲ್ಲಾ ನ್ಯಾಯಾಲಯಕ್ಕೆ ಒಂದೊಂದರಂತೆ ಹಾಗೂ ಸದರಿ ಕಛೇರಿಗೆ ಹೊಂದಿಕೊಂಡಂತೆ ಪ್ರತಿ ನ್ಯಾಯಾಲಯಕ್ಕೆ 1 ಶೀಘ್ರಲಿಪಿಗಾರರು, 1 ಪ್ರಥಮ ದರ್ಜೆ ಸಹಾಯಕರು, 1 ದ್ವಿತೀಯ ದರ್ಜೆ ಸಹಾಯಕರು, 1 ಬೆರಳಚ್ಚುಗಾರರು ಹಾಗೂ 1 ಪ್ಯೂನ್ ಹುದ್ದೆಗಳನ್ನು ಸೃಜಿಸಲು ಮತ್ತು ಕಛೇರಿಯ ದಿನನಿತ್ಯದ ಉಪಯೋಗಕ್ಕೆ ಅಗತ್ಯವಾಗಿರುವ ವಿದ್ಯುಚ್ಛಕ್ತಿ ಹಾಗೂ ದೂರವಾಣಿ ಮತ್ತು ಪೀಠೋಪಕರಣಗಳನ್ನು ಖರೀದಿಸಲು ಒಟ್ಟಾರೆ ವಾರ್ಷಿಕ ರೂ. 315.00 ಲಕ್ಷಗಳನ್ನು ಒದಗಿಸಲಾಗಿದೆಯೆಂದು ತಿಳಿಸಿ, ಇದಕ್ಕೆ ಮಂಜೂರಾತಿ ಆದೇಶವನ್ನು ಹೊರಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 39 ಎಲ್‌ಸಿಇ 2011, ಬೆಂಗಳೂರು, ದಿನಾಂಕ 18ನೇ ಜೂನ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಕೇಂದ್ರ ಸರ್ಕಾರವು 13ನೇ ಆರ್ಥಿಕ ಆಯೋಗದ ಅಡಿಯಲ್ಲಿ ಒದಗಿಸಲಾಗಿರುವ ರೂ.315.00 ಲಕ್ಷಗಳ (ಮೂರು ನೂರಾ ಹದಿನೈದು ಲಕ್ಷ ರೂಪಾಯಿಗಳು ಮಾತ್ರ) ಅನುದಾನದ ಅಡಿಯಲ್ಲಿ ಒಟ್ಟು 34 ಕೋರ್ಟ್ ಮ್ಯಾನೇಜರ್ ಹುದ್ದೆಗಳನ್ನು ಅಂದರೆ ಕರ್ನಾಟಕ ಉಚ್ಚ ನ್ಯಾಯಾಲಯದ ಪ್ರಧಾನ ಶಾಖೆಗಳಿಗೆ 2 ಹಾಗೂ ಧಾರವಾಡ ಮತ್ತು ಗುಲ್ಬರ್ಗ ಉಚ್ಚ ನ್ಯಾಯಾಲಯದ ಸಂಚಾರಿ ನ್ಯಾಯಪೀಠಕ್ಕೆ ಒಂದೊಂದು ಮತ್ತು ರಾಜ್ಯದ ಪ್ರತಿ ಜಿಲ್ಲಾ ನ್ಯಾಯಾಲಯಕ್ಕೆ ಒಂದೊಂದರಂತೆ ಕೋರ್ಟ್ ಮ್ಯಾನೇಜರ್ ಹುದ್ದೆಗಳನ್ನು ಸೃಜಿಸಲಾಗಿದೆ. ಜೊತೆಗೆ ಪ್ರತಿಯೊಂದು ಕೋರ್ಟ್ ಮ್ಯಾನೇಜರ್ ಹುದ್ದೆಗೆ ಸಹಾಯಕ ಸಿಬ್ಬಂದಿಯಾಗಿ ಅಂದರೆ 1 ಶೀಘ್ರಲಿಪಿಗಾರರು, 1 ಪ್ರಥಮ ದರ್ಜೆ ಸಹಾಯಕರು, 1 ಬೆರಳಚ್ಚುಗಾರರು ಹಾಗೂ 1 ಪ್ಯೂನ್ ಹುದ್ದೆಗಳು ಸೇರಿದಂತೆ ಒಟ್ಟು 136 ಸಿಬ್ಬಂದಿ ಹುದ್ದೆಗಳನ್ನು ದಿನಾಂಕ 31-03-2015 ರವರೆಗೆ ಜಾರಿಯಲ್ಲಿರುವಂತೆ ಈ ಕೆಳಕಂಡ ಪಟ್ಟಿಯಲ್ಲಿ ಸೂಚಿಸಿರುವ ವಿವರಗಳನುಸಾರ ಹೊಸ ಹುದ್ದೆಗಳನ್ನು ಸೃಜಿಸಲು ಮತ್ತು ಅವರ ವೇತನ ಇತ್ಯಾದಿ ಸೌಲಭ್ಯಗಳನ್ನು ನೀಡಲು ಸರ್ಕಾರ ಮಂಜೂರಾತಿ ನೀಡಿದೆ.

| ಕ್ರಸಂ. | ಹುದ್ದೆಗಳ ಹೆಸರು | ಮೂಲ ವೇತನ ರೂ. | ಒಟ್ಟು ಹುದ್ದೆಗಳು |
|---|---|---|---|
| 1 | ಕೋರ್ಟ್ ಮ್ಯಾನೇಜರ್ | 50,000.00 | 34 |
| 2 | ಶೀಘ್ರಲಿಪಿಗಾರರು | 7,275.00 | 34 |
| 3 | ಪ್ರಥಮ ದರ್ಜೆ ಸಹಾಯಕ | 7,275.00 | 34 |
| 4 | ಬೆರಳಚ್ಚುಗಾರ | 5,800.00 | 34 |
| 5 | ಪ್ಯೂನ್ | 4,800.00 | 34 |
| | ಒಟ್ಟು | | **170** |

2. ಭಾರತ ಸರ್ಕಾರದ ಮಾರ್ಗಸೂಚಿಯಂತೆ ಕೋರ್ಟ್ ಮ್ಯಾನೇಜರ್ ಹುದ್ದೆಗಳ ನೇಮಕಾತಿಗೆ ಎಂ.ಬಿ.ಎ. ವಿದ್ಯಾರ್ಹತೆಯನ್ನು ನಿಗದಿಪಡಿಸಿದ್ದು ಮಾಸಿಕ ರೂ. 50,000/-ಗಳ ನಿಗದಿತ ವೇತನದ ಆಧಾರದ ಮೇಲೆ ದಿನಾಂಕ 31.03.2015 ರವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಬಹುದು. ಹಾಗೂ ಕೋರ್ಟ್ ಮ್ಯಾನೇಜರ್ ಹುದ್ದೆ ಮತ್ತು ಕಛೇರಿಯ ಸಿಬ್ಬಂದಿಗಳ ಹುದ್ದೆಗೆ ನಿಗದಿಪಡಿಸಿದ ವೇತನದ ಜೊತೆಗೆ ಪ್ರತಿ ವರ್ಷ ಶೇ. 10 ರಷ್ಟು ವೇತನವನ್ನು ಹೆಚ್ಚಿಸಲು ಕ್ರಮ ತೆಗೆದುಕೊಳ್ಳಬಹುದು. ಕಛೇರಿಯ ಆವರ್ತ ಮತ್ತು ಅನವರ್ತಕ ವೆಚ್ಚಗಳ ಬಗ್ಗೆ ಮಹಾ ವಿಲೇಖನಾಧಿಕಾರಿಯವರು ಅಂದಾಜು ವೆಚ್ಚಗಳನ್ನು ಯೋಜನೆ ರೂಪಿಸಿ ಅಳವಡಿಸಿಕೊಳ್ಳಲು ಸಹ ಸೂಚಿಸಲಾಗಿದೆ.

3. ಭಾರತ ಸರ್ಕಾರದ ಮಾರ್ಗಸೂಚಿಯಂತೆ ಬೆಳಗಿನ ಹಾಗೂ ಸಾಯಂಕಾಲದ ನ್ಯಾಯಾಲಯಗಳ ಕೋರಿಕೆಯನುಸಾರ ಒಟ್ಟು ರೂ. 15.76 ಕೋಟಿಗಳ ಹಂಚಿಕೆಯಾದ ಹಣದಲ್ಲಿ ಸದರಿ ನ್ಯಾಯಾಲಯಗಳಿಗೆ ಬೇಕಾಗುವ ಸಲಕರಣೆಗಳನ್ನು ಹಾಗೂ ಪೀಠೋಪಕರಣಗಳ ಇತರೆ ಬಾಬುಗಳ ಒಟ್ಟಾರೆ ಉಳಿತಾಯವಾಗುವ ಅನುದಾನದಿಂದ ಭರಿಸಲು ಕ್ರಮ ಕೈಗೊಳ್ಳುವಂತೆ ಅನುಮೋದನೆ ನೀಡಲಾಗಿದೆ.

4. ಭಾರತ ಸರ್ಕಾರದ ಮಾರ್ಗಸೂಚಿಯಂತೆ ಸೃಜಿಸಲಾದ ನ್ಯಾಯಾಲಯಗಳ ಹುದ್ದೆಗಳನ್ನು ದಿನಾಂಕ 31–03–2015ರವರೆಗೆ ಮಾನ್ಯ ಉಚ್ಚ ನ್ಯಾಯಾಲಯವು ಸದರಿ ಹುದ್ದೆಗಳ ಕಾರ್ಯ ಕ್ಷಮತೆಯನ್ನು ಮೌಲ್ಯಮಾಪನಗೊಳಿಸಿ ದಿನಾಂಕ 31–03–2015ರ ನಂತರವೂ ಮುಂದುವರೆಸಲು ಬಯಸಿದಲ್ಲಿ ಈ ಬಗ್ಗೆ ರಾಜ್ಯ ಸರ್ಕಾರದ ಅನುಮೋದನೆಯನ್ನು ಪಡೆಯಬಹುದಾಗಿದೆ. ಒಂದು ವೇಳೆ ಈ ಹುದ್ದೆಗಳನ್ನು ದಿನಾಂಕ 31–03–2015ರ ನಂತರವು ಮುಂದುವರೆಸಲು ಇಚ್ಚಿಸಿದಲ್ಲಿ, ನೇಮಕಾತಿ ಪ್ರಕ್ರಿಯೆ ಹಾಗೂ ಮ್ಯಾನೇಜರ್ ಹುದ್ದೆಗಳ ವೇತನ ಶ್ರೇಣಿಯ ಬಗ್ಗೆ, ಆ ಹಂತದಲ್ಲಿಯೇ ನಿರ್ಧರಿಸಬೇಕಾಗುತ್ತದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 1659 F Secy (B&R) 11, ದಿನಾಂಕ 18–05–2011ರ ಸಹಮತದೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. ನಂ. 1728

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ರಸ್ತೆ ಅಭಿವೃದ್ಧಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಇವರ ಪತ್ರ ಸಂಖ್ಯೆ : ಡಿಎಸ್‌ಕೆ/ರಕರ/ಅನುದಾನ/1/2011–12, ದಿನಾಂಕ : 20–05–2011.

2. ಸರ್ಕಾರದ ಆದೇಶ ಸಂಖ್ಯೆ : ವಾಕೈ 55 ಅಂಆಸ (1) 2011, ದಿನಾಂಕ 1–4–2011.

**ಪ್ರಸ್ತಾವನೆ :**

ರಾಜ್ಯದ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆ ಕಾಮಗಾರಿಗಳ ಅನುಷ್ಠಾನಕ್ಕಾಗಿ 2011–12ನೇ ಸಾಲಿನಲ್ಲಿ ಒದಗಿಸಲಾಗಿರುವ ₹ 850/– ಲಕ್ಷಗಳನ್ನು ಆದ್ಯತೆ ಮೇರೆಗೆ ಬಿಡುಗಡೆಗೊಳಿಸಲು ಸಕ್ಕರೆ ನಿರ್ದೇಶಕರು ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ 20–05–2011ರ ಪತ್ರದಲ್ಲಿ ಪ್ರಸ್ತಾಪಿಸಿದ್ದಾರೆ.

(₹ ಲಕ್ಷಗಳಲ್ಲಿ)

| ಕ್ರ.ಸಂ. | ಕಾರ್ಖಾನೆಯ ಹೆಸರು | ವರ್ಷ | ಮೊತ್ತ |
|---|---|---|---|
| 1 | ಶ್ಯಾಮನೂರು ಶುಗರ್ಸ್ | 1999–2000 | 10.00 |
| 2 | ಶ್ಯಾಮನೂರು ಶುಗರ್ಸ್ | 2002–2003 | 17.16 |
| 3 | ದಾವಣಗೆರೆ ಶುಗರ್ಸ್ | 2002–2003 | 19.48 |
| 4 | ನಂದಿ ಸಸಕಾ | 2002–2003 | 17.62 |
| 5 | ಕೃಷ್ಣಾ ಸಸಕಾ | 2002–2003 | 12.26 |
| 6 | ಹಾಲಸಿದ್ದನಾಥ ಸಸಕಾ | 2002–2003 | 10.45 |
| 7 | ಐ.ಸಿ.ಎಲ್. ಶುಗರ್ಸ್ | 2001–2002 | 26.30 |
| 8 | ರೇಣುಕಾ ಶುಗರ್ಸ್ | 2002–2003 | 29.91 |
| 9 | ಮಲಪ್ರಭಾ ಸಸಕಾ | 2002–2003 | 16.16 |
| 10 | ಘಟಪ್ರಭಾ ಸಸಕಾ | 2002–2003 | 19.65 |
| 11 | ಅಥಣಿ ಶುಗರ್ಸ್ | 2002–2003 | 14.30 |
| 12 | ರೈತರ ಸಸಕಾ | 2002–2003 | 19.20 |
| **ಒಟ್ಟು** | | | **212.49** |

ಮೇಲೆ ಓದಲಾದ (2)ರ ಆದೇಶದಲ್ಲಿ 2011–12ನೇ ಸಾಲಿನ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಮುಂದುವರೆದ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಮಂಜೂರಾತಿ ನೀಡುವ ಸಂಬಂಧ ಹೊರಡಿಸಿರುವ ಆದೇಶದಲ್ಲಿ ಇಲಾಖೆಯ ಲೆಕ್ಕ ಶೀರ್ಷಿಕೆ 4860–04–800–0–01 ರಡಿಯಲ್ಲಿ ₹ 850.00 ಲಕ್ಷಗಳನ್ನು ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಒದಗಿಸಲಾಗಿದೆ.

ಆಯುಕ್ತರು, ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 90 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ 10ನೇ ಜೂನ್ 2011**

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಅಭಿವೃದ್ಧಿಪಡಿಸುವ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸಲು 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4860–04–800–0–01 ರಡಿಯಲ್ಲಿ ಒದಗಿಸಲಾಗಿರುವ ₹ 850.00 ಲಕ್ಷಗಳಲ್ಲಿ ಮೊದಲನೇ ತ್ರೈಮಾಸಿಕಕ್ಕೆ ಶೇ. 25 ಭಾಗ ಅಂದರೆ ₹ 212.49 ಲಕ್ಷಗಳನ್ನು (ಎರಡುನೂರ ಹನ್ನೆರಡು ಲಕ್ಷದ ನಲವತ್ತೊಂಬತ್ತು ಸಾವಿರ ರೂಪಾಯಿಗಳು ಮಾತ್ರ) ಪ್ರಸ್ತಾವನೆಯಲ್ಲಿ ನಮೂದಿಸಿರುವ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಕಾಮಗಾರಿಗಳಿಗಾಗಿ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರಿಗೆ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಟಿಪ್ಪಣಿ ಸಂಖ್ಯೆ ವಾಕೈ 103 ಆಂಆಸ (1) 2011, ದಿನಾಂಕ 07–06–2011 ರಲ್ಲಿ ನೀಡಲಾದ ಸಹಮತಿಯಂತೆ ಹಾಗೂ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಶಂಕರ ನಾಯಕ್. ಎಲ್.**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. ನಂ. 1729

## INFRASTRUCTURE DEVELOPMENT SECRETARIAT

**Sub:** Development Tadadi Sea Port – release of funds regarding.

**Read:**
1. Letter No. DGM (IPD)/TP/2796/2010-11 dated 21-02-2011 from The Deputy General Manager, KSIIDC, Bangalore.
2. G.O. No. IDD 30 DIA 2011 dated 25-03-2011.
3. Letter No. DGM (IPD)/TP/380/2011-12 dated 23-05-2011 from The Deputy General Manager, KSIIDC, Bangalore

**Preamble :**

In the letter read at Sl. No. (1) above, the Deputy General Manager, KSIIDC, has sent details of expenditure incurred/ committed towards **consultancy services** engaged by the corporation with regard to development of Sea Port at Tadadi.

| Sl.No. | Details | Amount (Rs.in lakhs) |
|---|---|---|
| 1 | Technical Consultants | 292.63 |
| 2 | Consultants for Environment Impact Study | 82.73 |
| 3 | Amount Payable to Secretarial Consultant | 0.50 |
| **TOTAL** | | **375.86** |

2. Further the expenditure incurred/ to be incurred for the current year 2010-11 towards Administrative & Establishment expenses is :

| Sl.No. | Details | Amount (Rs.in lakhs) |
|---|---|---|
| 1 | Advertisement | 20.00 |
| 2 | Formation of SPV | 5.50 |
| 3 | Establishment Expenses | 155.19 |
| 4 | Administrative Expenses | 23.40 |
| **TOTAL** | | **204.09** |

3. The Deputy General Manager, KSIIDC, had requested for release of funds in order to implement the project. In the G.O. read at Sl. No. (2) above, sanction was accorded for release of Rs.1.00 crore to KSIIDC, towards Tadadi Port related expenditure incurred by KSIIDC.

4. In letter read at Sl. No. (3) above, The Deputy General Manager, KSIIDC, has sent a proposal for release of Rs. 479.95 lakhs being the balance amount towards consultancy services provided for Development of Tadadi Sea Port.

5. The proposal has been examined and hence the following order :

**GOVERNMENT ORDER NO.: IDD 30 DIA 2011, BANGALORE, DATED: 20-06-2011**

After careful consideration of the above proposal, sanction of the Government is hereby accorded for the release of 135.50 lakhs (Rupees one hundred thirty five lakhs and fifty thousand only) to KSIIDC under the Head of Account 5465-01-190-1-18- Tadadi Sea Port Project towards the Tadadi Port related expenditure incurred by KSIIDC.

2. The Managing Director, KSIIDC is authorized to draw the above amount on a payee's receipt duly countersigned by the Under Secretary to Government, Infrastructure Development Department.

3. The order is issued under the financial powers delegated to the Secretaries vide G.O. No. FD 1 TFP 2008, dated 16-05-2008.

By Order and in the name of the Governor of Karnataka,
**C.A. BABURAVINDRANATH PATEL,**
Under Secretary to Government,
Infrastructure Development Department.

PR No. 1730

## INFRASTRUCTURE DEVELOPMENT SECRETARIAT

**Sub:** Servicing of HUDCO Loan availed for procurement of land for Bangalore International Airport Project.

**Read:**
1. G.O. No. IDD 47 DIA 2006 dated 29-06-2007.
2. G.O. No. IDD 47 DIA 2006 (P) dated 24-09-2007.
3. G.O. No. IDD 47 DIA 2006 (P) dated 25-09-2007.
4. G.O. No. IDD 47 DIA 2006 (P) dated 03-12-2007.
5. G.O. No. IDD 47 DIA 2006 dated 25-03-2008.
6. G.O. No. IDD 47 DIA 2006 dated 23-06-2008.
7. G.O. No. IDD 47 DIA 2007 dated 16-09-2008.
8. G.O. No. IDD 47 DIA 2007 dated 15-12-2008.
9. G.O. No. IDD 47 DIA 2006 dated 13-03-2009.
10. G.O. No. IDD 47 DIA 2006 dated 12-08-2009.
11. G.O. No. IDD 47 DIA 2006 dated 26-09-2009.
12. G.O. No. IDD 47 DIA 2006 dated 17-12-2009.
13. G.O. No. IDD 33 DIA 2010 dated 23-03-2010.
14. G.O. No. IDD 33 DIA 2010 dated 22-06-2010.
15. G.O. No. IDD 33 DIA 2010 dated 23-09-2010.
16. G.O. No. IDD 33 DIA 2010 dated 21-12-2010.
17. G.O. No. IDD 33 DIA 2010 dated 04-03-2011.
18. Letter No. DGM (IPD-1)/482-2011-12 dated 03-06-2011 of the Deputy General Manager (IPD-1), KSIIDC.

**Preamble:**

In the G.O.'s read at Sl. No. (1) to (17) above, periodical release of funds have been made to KSIIDC for servicing HUDCO loan for the period 2007, 2008, 2009, 2010 and for the quarters ending June, September, December and March 2011.

2. In the letter dated 03-06-2011 read at Sl.No. (18) above, the Deputy General Manager (IPD-1), KSIIDC has requested for release of an amount of Rs. 379.78 lakhs (Principal Rs. 272.58 lakhs + Interest Rs. 101.08+service charges 6.12 lakhs) only towards servicing of HUDCO loan for the quarter ending June 2011.

3. Government have considered release of funds for servicing of HUDCO loan for the quarter ending June 2011 and hence the following order.

**GOVERNMENT ORDER NO.: IDD 33 DIA 2010, BANGALORE, DATED: 21-06-2011**

After careful examination of the proposal, sanction of the Government is hereby accorded for release of Rs. 373.66 lakhs (Rupees Three crore Seventy Three lakhs Sixty Six thousand only) to KSIIDC under the Head of Account **"5465-01-190-1-04 (P) – BIAP Assistance for repayment of HUDCO loan – 240 Debt Servicing"** towards HUDCO loan service for the quarter ending June 2011, out of the Budget Provision of Rs. 1463.00 lakhs in 2011-12.

2. The Managing Director, KSIIDC is authorized to draw the amount on a payees receipt duly countersigned by the Under Secretary to Government, Infrastructure Development Department.

3. This order is issued in concurrence of F.D. vide U.O. Note No. FD 1011 Exp-I/11, dated 17-06-2011.

By Order and in the name of the Governor of Karnataka,
**C.A. BABURAVINDRANATH PATEL,**
Under Secretary to Government,
Infrastructure Development Department.

PR No. 1731

## ತೋಟಗಾರಿಕಾ ಸಚಿವಾಲಯ

**ವಿಷಯ :** ಉತ್ತರಕನ್ನಡ ಜಿಲ್ಲೆ, ಶಿರಸಿ ತಾಲ್ಲೂಕು, ಶಿರಸಿಯಲ್ಲಿರುವ ರೇಷ್ಮೆ ಇಲಾಖೆಯ ಜಮೀನನ್ನು ತೋಟಗಾರಿಕೆ ಕಾಲೇಜು ಸ್ಥಾಪಿಸುವುದಕ್ಕಾಗಿ ತೋಟಗಾರಿಕೆ ಇಲಾಖೆಗೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ವಾಕೈ 14 ರೇಯೋವಿ 2010, ದಿನಾಂಕ 29–5–2010.
2. ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ ಇವರ ಅ.ಟಿ. ಸಂಖ್ಯೆ : ಹೆಚ್‌ಸಿಡಿ 505 ಹೆಚ್‌ಜಿಎಂ 2010, ದಿನಾಂಕ 9–12–2010.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ : ರೇಬೀರೇಕ್ಷೆ/ರೇಕೃಕ್ಷೇತಾಂ/ತೋವಿವಿ/ಹಸ್ತಾಂತರ/03/10–11, ದಿನಾಂಕ 16–3–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಉತ್ತರಕನ್ನಡ ಜಿಲ್ಲೆ, ಶಿರಸಿ ತಾಲ್ಲೂಕಿನ ಶಿರಸಿ ನಗರದಲ್ಲಿನ ಕೆಲವು ಕಟ್ಟಡಗಳನ್ನು ಹಾಗೂ 20 ಎಕರೆ ಜಮೀನನ್ನು 2 ವರ್ಷಗಳ ಅವಧಿಗೆ ಮಾತ್ರ ತೋಟಗಾರಿಕಾ ಕಾಲೇಜು ಪ್ರಾರಂಭಿಸುವುದಕ್ಕಾಗಿ ತಾತ್ಕಾಲಿಕವಾಗಿ ತೋಟಗಾರಿಕೆ ಇಲಾಖೆಗೆ ನೀಡಲು ಮಂಜೂರಾತಿ ನೀಡಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (2) ರ ಅ.ಟಿ. ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ ಇವರು ಸದರಿ ಸ್ಥಳವು

ತೋಟಗಾರಿಕೆ ಕಾಲೇಜು ನಿರ್ಮಿಸುವುದಕ್ಕೆ ತುಂಬಾ ಸೂಕ್ತವಾಗಿರುವುದರಿಂದ ಈ ಜಮೀನನ್ನು ಹಾಗೂ 5 ಕಟ್ಟಡಗಳನ್ನು ಶಿರಸಿಯಲ್ಲಿ ತೋಟಗಾರಿಕಾ ಕಾಲೇಜು ಪ್ರಾರಂಭಿಸುವುದಕ್ಕಾಗಿ ಖಾಯಂ ಆಗಿ ತೋಟಗಾರಿಕಾ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರಿಗೆ ಖಾಯಂ ಆಗಿ ಹಸ್ತಾಂತರಿಸುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಕುರಿತಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಭಿಪ್ರಾಯ ಕೋರಿದಾಗ ಅವರು ಈಗಾಗಲೇ ನೀಡಲಾಗಿರುವ ಜಮೀನನ್ನು 33 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಅಥವಾ ಮುಂದಿನ ದಿನಗಳಲ್ಲಿ ಇಲಾಖೆಗೆ ಬಿಟ್ಟುಕೊಡುವ ಷರತ್ತಿನೊಂದಿಗೆ ನೀಡಬಹುದಾಗಿದೆ ಎಂದು ಅಭಿಪ್ರಾಯ ನೀಡಿದ್ದು, ಈಗಾಗಲೇ ಹಸ್ತಾಂತರಿಸಿ ಉಳಿದಿರುವ ಜಮೀನು ಮತ್ತು ಕಟ್ಟಡಗಳನ್ನು ಪ್ರಸ್ತುತ ಸುವರ್ಣ ಭೂಮಿ ಯೋಜನೆಯಡಿ ರೇಷ್ಮೆ ಕೃಷಿ ಅಭಿವೃದ್ಧಿಗಾಗಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗುತ್ತಿದೆಯಾದ್ದರಿಂದ ಹೆಚ್ಚುವರಿಯಾಗಿ ನೀಡಲು ಸಾಧ್ಯವಾಗುವುದಿಲ್ಲವೆಂದು ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಅಭಿಪ್ರಾಯ ನೀಡಿರುತ್ತಾರೆ.

ಶಿರಸಿಯಲ್ಲಿ ತೋಟಗಾರಿಕೆ ಕಾಲೇಜು ಪ್ರಾರಂಭಿಸುವುದಕ್ಕಾಗಿ ರೇಷ್ಮೆ ಆಯುಕ್ತರ ಅಭಿಪ್ರಾಯದ ಹಿನ್ನೆಲೆಯಲ್ಲಿ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, 20 ಎಕರೆ ಜಮೀನನ್ನು ಗುತ್ತಿಗೆಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 14 ರೇಯೋವಿ 2010, ಬೆಂಗಳೂರು, ದಿನಾಂಕ 16ನೇ ಜೂನ್ 2011**

ಉತ್ತರಕನ್ನಡ ಜಿಲ್ಲೆ, ಶಿರಸಿ ತಾಲ್ಲೂಕಿನಲ್ಲಿ ತೋಟಗಾರಿಕಾ ಕಾಲೇಜನ್ನು ಪ್ರಾರಂಭಿಸುವುದಕ್ಕಾಗಿ ರೇಷ್ಮೆ ಇಲಾಖೆಯು ಶಿರಸಿಯಲ್ಲಿ ಹೊಂದಿರುವ ಜಮೀನಿನಲ್ಲಿ ಈಗಾಗಲೇ ದಿನಾಂಕ 29–05–2010ರ ಸಮಸಂಖ್ಯೆಯ ಆದೇಶದಲ್ಲಿ ತಾತ್ಕಾಲಿಕವಾಗಿ ಎರಡು (2) ವರ್ಷಗಳ ಅವಧಿಗೆ ಹಸ್ತಾಂತರಿಸಲಾಗಿರುವ 20 ಎಕರೆ ಜಮೀನು ಹಾಗೂ ಕಟ್ಟಡಗಳನ್ನು ಮಾತ್ರ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಅಥವಾ ಮುಂದಿನ ದಿನಗಳಲ್ಲಿ ರೇಷ್ಮೆ ಇಲಾಖೆಗೆ ಅವಶ್ಯಕವೆನಿಸಿದಾಗ ಬಿಟ್ಟುಕೊಡಬೇಕೆಂಬ ಷರತ್ತಿನೊಂದಿಗೆ ತೋಟಗಾರಿಕೆ ಇಲಾಖೆಗೆ ನೀಡುವುದಕ್ಕೆ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್,**

ಪಿ.ಆರ್.ನಂ. 1732

ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ (ರೇಷ್ಮೆ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ವಿವಿಧ ಇಲಾಖೆ/ಸ್ವಾಯತ್ತ ಸಂಸ್ಥೆಗಳಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳು/ತಜ್ಞರುಗಳು/ಹಿರಿಯ ತಜ್ಞರುಗಳ ಸೇವೆಯನ್ನು ಮಾತೃ ಇಲಾಖೆಗೆ ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**
1. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂ. 155/2011 (ಪಿಐಎಲ್–ಜಿಎಂ– ಆರ್‌ಇಎಸ್) ದಿನಾಂಕ 18–01–2011 ರಂದು ನೀಡಿರುವ ತೀರ್ಪು.
2. ಸರ್ಕಾರದ ಆದೇಶ ಸಂಖ್ಯೆ : ಆಕುಕ 33 ಎಂಎಸ್‌ಎಸ್ 2011, ದಿನಾಂಕ 28–02–2011.
3. ಸರ್ಕಾರದ ಆದೇಶ ಸಂಖ್ಯೆ : ಆಕುಕ 33 ಎಂಎಸ್‌ಎಸ್ 2011, ದಿನಾಂಕ 06–04–2011 (ಭಾಗ–1, ಭಾಗ–2 ಮತ್ತು ಭಾಗ–3).
4. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂ. 16904–17092/2011 (ಎಸ್‌ಆರ್‌ಎಸ್) ರಲ್ಲಿ ದಿನಾಂಕ 03–06–2011 ರಂದು ನೀಡಿದ ತೀರ್ಪು.

**ಪ್ರಸ್ತಾವನೆ :**

ಡಾ॥ ಸಿ. ಅರವಿಂದ್ ಮತ್ತು ಇತರರು ರಿಟ್ ಅರ್ಜಿ ಸಂಖ್ಯೆ : 155/2011 ರಲ್ಲಿ ರಾಜ್ಯ ಸರ್ಕಾರ ಮತ್ತು ಇತರರ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ ರಿಟ್ ಅರ್ಜಿ ಕುರಿತು ಗೌರವಾನ್ವಿತ ಮುಖ್ಯ ನ್ಯಾಯಾಧೀಶರನ್ನೊಳನೊಂಡ ವಿಭಾಗೀಯ ಪೀಠವು ದಿನಾಂಕ 18–01–2011 ರಂದು ಈ ಕೆಳಗಿನಂತೆ ತೀರ್ಪು ನೀಡಿದೆ.

1. ರಾಜ್ಯಾದ್ಯಂತ ಎಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಖಾಲಿ ಇರುವ ವೈದ್ಯರ ಹುದ್ದೆಗಳನ್ನು ತುಂಬುವಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಪ್ರಸ್ತುತ ಲಭ್ಯವಿರುವ ವೈದ್ಯರ ಸೇವೆಯನ್ನು ಸರಿಯಾದ ಪ್ರಮಾಣದಲ್ಲಿ ಹಂಚಿಕೆ ಮಾಡುವ ಕುರಿತು ಒಂದು ವಿವೇಚನಾ ಪೂರ್ವವಾದ ನಿರ್ಣಯ ತೆಗೆದುಕೊಂಡು ದಿನಾಂಕ 28.02.2011ರ ವೇಳೆಗೆ ಘೋಷಿಸುವುದು ;
2. ಸದರಿ ನಿರ್ಣಯದ ಪ್ರಕಾರ, ವೈದ್ಯರನ್ನು ಸರ್ಕಾರಿ ಆಸ್ಪತ್ರೆಗಳಿಗೆ ದಿನಾಂಕ 1–04–2011ರ ಒಳಗೆ ಸ್ಥಳನಿಯುಕ್ತಿ ಮಾಡಿ ಆದೇಶ ಹೊರಡಿಸುವುದು ; ಮತ್ತು
3. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗೆ ಸೇರಿದ ಹಲವು ವೈದ್ಯರು ವಿವಿಧ ಆಸ್ಪತ್ರೆಗಳು/ಸಂಸ್ಥೆಗಳಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದು, ಇಲಾಖೆಯಲ್ಲಿನ ಆಸ್ಪತ್ರೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯರ ಸಂಖ್ಯಾ ಬಲವನ್ನು ಸುಧಾರಿಸಲು ಅವರ ಸೇವೆಯನ್ನು ಮಾತೃ ಇಲಾಖೆಗೆ ಹಿಂಪಡೆಯಲು ಇಲಾಖೆಗೆ ಸ್ವಾತಂತ್ರ್ಯ ನೀಡಿದೆ. ಒಂದು ವೇಳೆ ಸೇವೆಯನ್ನು ಹಿಂಪಡೆದ ನಂತರವೂ ಆದೇಶ ಪಾಲಿಸದಿದ್ದಂತಹ ವೈದ್ಯರ ಮೇಲೆ ಇಲಾಖೆಯು ಶಿಸ್ತುಕ್ರಮ ಜರುಗಿಸುವುದು.

ಕರ್ನಾಟಕ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಮೇಲೆ (2) ರಲ್ಲಿ ಓದಲಾದ ಸರ್ಕಾರದ ದಿನಾಂಕ 28–02–2011ರ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಡಿ ರಾಜ್ಯದಾದ್ಯಂತ ಬರುವ ಎಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿನ ವಿವಿಧ ವೃಂದದ ವೈದ್ಯರುಗಳ ಕೊರತೆಯನ್ನು ನೀಗಿಸುವ ಸಲುವಾಗಿ ಪ್ರಸ್ತುತ ಲಭ್ಯವಿರುವ ವೈದ್ಯರುಗಳ ಸೇವೆಯನ್ನು ಆದ್ಯತೆ ಮೇರೆಗೆ ಅವಶ್ಯವಿರುವ ಆಸ್ಪತ್ರೆಗಳಿಗೆ

ವರ್ಗಾವಣೆ ಮಾಡಿ ಸಾರ್ವಜನಿಕರಿಗೆ ಆರೋಗ್ಯ ಸೇವೆಯನ್ನು ಸರಿಯಾದ ಪ್ರಮಾಣದಲ್ಲಿ ಹಂಚಿಕೆ ಮಾಡುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲು ಸರ್ಕಾರವು ವಿವೇಚನಾ ಪೂರ್ವವಾದ ನಿರ್ಣಯವನ್ನು ತೆಗೆದುಕೊಂಡು ಅದರಂತೆ ಜಾರಿಗೊಳಿಸಲು ಆದೇಶಿಸಿದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ 6–04–2011ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಉಚ್ಛ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರನ್ನೊಳನೊಂಡ ವಿಭಾಗೀಯ ಪೀಠವು ನೀಡಿದ ತೀರ್ಪಿನ ಅನ್ವಯ ಹಾಗೂ ಮೇಲೆ (2) ರ ಆದೇಶ ದಿನಾಂಕ 28–02–2011ರ ಆದೇಶಕ್ಕೆ ಅನುಗುಣವಾಗಿ ರಾಜ್ಯಾದ್ಯಂತ ಎಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಲಭ್ಯವಿರುವ ವೈದ್ಯರ ಸೇವೆಯನ್ನು ಸರಿಯಾದ ಪ್ರಮಾಣದಲ್ಲಿ ಹಂಚಿಕೆ ಮಾಡಿ ವೈದ್ಯಾಧಿಕಾರಿಗಳ/ತಜ್ಞ ವೈದ್ಯಾಧಿಕಾರಿಗಳಿಗೆ ಸ್ಥಳ ನಿಯುಕ್ತಿ ಮಾಡಿ ಆದೇಶಿಸಿದೆ. ಸದರಿ ಆದೇಶದಲ್ಲಿ ವಿವಿಧ ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ 28 ತಜ್ಞರು/ಹಿರಿಯ ತಜ್ಞರು ಸಹ ಸೇರಿದ್ದಾರೆ. ಸದರಿ ವೈದ್ಯಾಧಿಕಾರಿಗಳ ಸ್ಥಳ ನಿಯುಕ್ತಿ ಆದೇಶವನ್ನು ಪ್ರಶ್ನಿಸಿ ಡಾ|| ಟಿ.ಎನ್. ಧನಂಜಯ ರವರನ್ನು ಒಳಗೊಂಡಂತೆ 189 ವೈದ್ಯಾಧಿಕಾರಿಗಳು ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಮೇಲೆ (4) ರಲ್ಲಿ ಓದಲಾದ ರಿಟ್ ಅರ್ಜಿ ಸಂಖ್ಯೆ : 16904–17092/2011 ದಾಖಲಿಸಿ, ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ಇತರರನ್ನು ಪ್ರತಿವಾದಿಗಳನ್ನಾಗಿ ಮಾಡಿದ್ದಾರೆ. ಈ ಪ್ರಕರಣದ ವಿಚಾರಣೆಯನ್ನು ಮುಖ್ಯ ನ್ಯಾಯಮೂರ್ತಿಗಳನ್ನೊಳಗೊಂಡ ವಿಭಾಗೀಯ ಪೀಠವು ದಿನಾಂಕ 3–06–2011 ರಂದು ವಿಚಾರಣೆ ಮಾಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಹಿತದೃಷ್ಟಿ ಹಾಗೂ ಅದರಡಿ ಬರುವ ವೈದ್ಯಕೀಯ ಸೇವೆಗಳಿಗೆ ಆದ್ಯತೆ ನೀಡುವುದು ಔಚಿತ್ಯಪೂರ್ಣ ಕರ್ತವ್ಯವಾಗಿರುವುದರಿಂದ ಆಸ್ಪತ್ರೆಗಳು/ಕೇಂದ್ರಗಳಿಗೆ ಸಾಕಷ್ಟು ವೈದ್ಯಕೀಯ ಸೇವೆಯನ್ನು ಆದ್ಯತೆ ಮೇಲೆ ಲಭ್ಯವಾಗುವಂತೆ ಅನುವಾಗಲು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ವೈದ್ಯರ ಸೇವೆಯನ್ನು ಮಾತ್ರ ಇಲಾಖೆಗೆ ವಾಪಸ್ಸು ಕರೆಸಿಕೊಳ್ಳಲು ಸಂಪೂರ್ಣ ಸ್ವಾತಂತ್ರ್ಯವನ್ನು ಮಾನ್ಯ ಉಚ್ಛ ನ್ಯಾಯಾಲಯವು ನೀಡಿದೆ.

ಕರ್ನಾಟಕ ಉಚ್ಛ ನ್ಯಾಯಾಲಯವು ದಿನಾಂಕ 3–06–2011 ರಂದು ನೀಡಿದ ತೀರ್ಪನ್ನು ಅನುಷ್ಠಾನಗೊಳಿಸುವ ಸಲುವಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಿವಿಧ ವೃಂದದ ವೈದ್ಯಾಧಿಕಾರಿಗಳ/ತಜ್ಞ ವೈದ್ಯರುಗಳ ಸೇವೆಯನ್ನು ಸಂಸ್ಥೆ/ಇಲಾಖೆಗಳಿಂದ ಹಿಂಪಡೆದು ಅವರುಗಳ ಸೇವೆಯನ್ನು ಇಲಾಖೆಯಲ್ಲಿ ಉಪಯೋಗಿಸಿಕೊಳ್ಳುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 52 ಎಂಎಸ್ಎಸ್ 2011, ಬೆಂಗಳೂರು, ದಿನಾಂಕ 17ನೇ ಜೂನ್ 2011**

ಕರ್ನಾಟಕ ಉಚ್ಛ ನ್ಯಾಯಾಲಯವು ದಿನಾಂಕ 3–06–2011 ರಂದು ರಿಟ್ ಅರ್ಜಿ ಸಂಖ್ಯೆ : 16904–17092/2011 (ಎಸ್ಆರ್ಎಸ್) ರಲ್ಲಿ ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಲ್ಲಿ/ಸ್ವಾಯತ್ತ ಸಂಸ್ಥೆಗಳಲ್ಲಿ/ಇಲಾಖೆಗಳಲ್ಲಿ ಪ್ರತಿನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸೇವೆಗೆ ಸೇರಿದ ಅನುಬಂಧದಲ್ಲಿ ತೋರಿಸಿರುವ ತಜ್ಞರು /ಹಿರಿಯ ತಜ್ಞರು/ ವೈದ್ಯಾಧಿಕಾರಿಗಳ ಸೇವೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮಾತ್ರ ಇಲಾಖೆಗೆ ಹಿಂಪಡೆದು ಆದೇಶಿಸಿದೆ.

ಈ ವೈದ್ಯಾಧಿಕಾರಿಗಳು ಆದೇಶ ಹೊರಡಿಸಿದ 15 ದಿನಗಳ ಒಳಗಾಗಿ ಬಿಡುಗಡೆ ಹೊಂದಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸೇವೆಗಳ ನಿರ್ದೇಶನಾಲಯದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ತಪ್ಪಿದ್ದಲ್ಲಿ ನಿಯಮಾನುಸಾರ ಅವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು.

ವಿವಿಧ ಇಲಾಖೆ ಮತ್ತು ಸ್ವಾಯತ್ತ ಸಂಸ್ಥೆಗಳಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ವೈದ್ಯಾಧಿಕಾರಿಗಳ ಸೇವೆಯನ್ನು ಅವರ ನಿಯಂತ್ರಣಾಧಿಕಾರಿಗಳು ಈ ಆದೇಶ ಹೊರಡಿಸಿದ 15 ದಿನಗಳ ಒಳಗಾಗಿ ಬಿಡುಗಡೆಗೊಳಿಸಲು ಕಟ್ಟುನಿಟ್ಟಿನ ಕ್ರಮ ಜರುಗಿಸುವುದು. ತಪ್ಪಿದಲ್ಲಿ ಮಾನ್ಯ ಉಚ್ಛ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರನ್ನೊಳನೊಂಡ ವಿಭಾಗೀಯ ಪೀಠದ ತೀರ್ಪನ್ನು ಉಲ್ಲಂಘಿಸಿದಂತಾಗುತ್ತದೆ. ಇದಕ್ಕೆ ಸಂಬಂಧಪಟ್ಟ ನಿಯಂತ್ರಣಾಧಿಕಾರಿಗಳು ಪೂರ್ಣ ಜವಾಬ್ದಾರರಾಗುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಫ್. ಹುಬ್ಬಳ್ಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 52 ಎಂಎಸ್ಎಸ್ 2011, ಬೆಂಗಳೂರು, ದಿನಾಂಕ 17ನೇ ಜೂನ್ 2011 ಕ್ಕೆ**

## ಅನುಬಂಧ

| ಕ್ರಮ ಸಂಖ್ಯೆ | ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ವೈದ್ಯರ ಹೆಸರು | ಇಲಾಖೆ/ಸ್ವಾಯತ್ತ ಸಂಸ್ಥೆಯ ಹೆಸರು |
|---|---|---|
| 1 | ಡಾ|| ಶಶಿಕಲಾದೇವಿ ಬಿ.ಜೆ. ಬನಶಂಕರಿ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 2 | ಡಾ|| ಚೇತನ, ಹೊಂಬತ್ತಿ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 3 | ಡಾ|| ಉಷಾದೇವಿ ಜಿ.ಎನ್., ವಿದ್ಯಾಪೀಠ ಆರೋಗ್ಯ ಕೇಂದ್ರ | ಬಿ.ಬಿ.ಎಂ.ಪಿ. |
| 4 | ಡಾ|| ಚೈತ್ರ ಕೆ., ಜಯನಗರ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 5 | ಡಾ|| ವಿಜಯಲಕ್ಷ್ಮಿ ಜಿ.ವಿ., ಯಡಿಯೂರು ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 6 | ಡಾ|| ಶರತ್ಚಂದ್ರ, ಮಡಿವಾಳ ಡಿಸ್ಪೆನ್ಸರಿ | ಬಿ.ಬಿ.ಎಂ.ಪಿ. |
| 7 | ಡಾ|| ಸುನೀಲ್ ಹೆಚ್., ಗಾಂಧಿ ಬಜಾರ್ ಡಿಸ್ಪೆನ್ಸರಿ | ಬಿ.ಬಿ.ಎಂ.ಪಿ. |
| 8 | ಡಾ|| ಸೈಯದ್ ನಜೀರಾ ಬತೂರ್, ಎನ್.ಎಸ್. ಪಾಳ್ಯ | ಬಿ.ಬಿ.ಎಂ.ಪಿ. |
| 9 | ಡಾ|| ನಂದಿನಿ ಎನ್. ಹೊಸಹಳ್ಳಿ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 10 | ಡಾ|| ಸವಿತಾ ಎಸ್., ರಾಜಾಜಿನಗರ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 11 | ಡಾ|| ಶಂಕರ್, ರಾಜಾಜಿನಗರ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |

| | | |
|---|---|---|
| 12 | ಡಾ॥ ಇಂದು ಎನ್., ಶ್ರೀರಾಂಪುರ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 13 | ಡಾ॥ ವಸಂತನಾಗ್ ಎನ್., ಶ್ರೀರಾಂಪುರ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 14 | ಡಾ॥ ಗಾಯಿತ್ರಿ ಆರ್.ಕೆ., ಕಾಟನ್‌ಪೇಟೆ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 15 | ಡಾ॥ ಜಯಂತಿ ಆರ್., ಆಂಜನಪ್ಪ ಗಾರ್ಡನ್ ಆರೋಗ್ಯ ಕೇಂದ್ರ | ಬಿ.ಬಿ.ಎಂ.ಪಿ. |
| 16 | ಡಾ॥ ಕವಿತ ಎಸ್., ರಾಮಚಂದ್ರಪುರ ಕು.ಕ. ಕೇಂದ್ರ | ಬಿ.ಬಿ.ಎಂ.ಪಿ. |
| 17 | ಡಾ॥ ಶಾಂತಿ ಎಸ್., ದಾಸಪ್ಪ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 18 | ಡಾ॥ ಮಹಾಲಕ್ಷ್ಮೀ, ಆಜಾದ್‌ನಗರ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 19 | ಡಾ॥ ಬಿ.ಎಸ್. ರಾಮಚಂದ್ರ | ಬಿ.ಬಿ.ಎಂ.ಪಿ. |
| 20 | ಡಾ॥ ರಾಧ ಎಲ್., ಸಿರ್ಸಿ ರಸ್ತೆ, ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 21 | ಡಾ॥ ವಿಜಯಲಕ್ಷ್ಮೀ, ಮಾಗಡಿ ರಸ್ತೆ, ಕು.ಕ. ಕೇಂದ್ರ | ಬಿ.ಬಿ.ಎಂ.ಪಿ. |
| 22 | ಡಾ॥ ಪದ್ಮಾ, ಹನುಮಂತನಗರ ಕು.ಕ. ಕೇಂದ್ರ | ಬಿ.ಬಿ.ಎಂ.ಪಿ. |
| 23 | ಡಾ॥ ಪ್ರಮೀಳಾ, ಮೂಡಲಪಾಳ್ಯ ಆರೋಗ್ಯ ಕೇಂದ್ರ | ಬಿ.ಬಿ.ಎಂ.ಪಿ. |
| 24 | ಡಾ॥ ರಮೇಶಚಂದ್ರ ರೆಡ್ಡಿ, ಹನುಮಂತನಗರ ಔಷಧಾಲಯ | ಬಿ.ಬಿ.ಎಂ.ಪಿ. |
| 25 | ಡಾ॥ ಪೂರ್ಣಿಮಾ, ಭುವನೇಶ್ವರಿನಗರ ಆರೋಗ್ಯ ಕೇಂದ್ರ | ಬಿ.ಬಿ.ಎಂ.ಪಿ. |
| 26 | ಡಾ॥ ಸತೀಶ್ ಪಿ., ವಸಂತನಗರ ಔಷಧಾಲಯ | ಬಿ.ಬಿ.ಎಂ.ಪಿ. |
| 27 | ಡಾ॥ ಮಂಜುಳ ಆರ್., ಗಂಗಾನಗರ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 28 | ಡಾ॥ ಹಲೀಮಾ ಸಾರಾ, ಜಯನಗರ ಡಿಸ್ಪೆನ್ಸರಿ | ಬಿ.ಬಿ.ಎಂ.ಪಿ. |
| 29 | ಡಾ॥ ಸಾಂರಾಜ್, ಹಳೇಬೈಯಪ್ಪನಹಳ್ಳಿ, ಆರೋಗ್ಯ ಕೇಂದ್ರ | ಬಿ.ಬಿ.ಎಂ.ಪಿ. |
| 30 | ಡಾ॥ ಹೇಮ ಎಂ., ಮುನಿರೆಡ್ಡಿಪಾಳ್ಯ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 31 | ಡಾ॥ ಉಮಾದೇವಿ ಎಂ., ಬ್ರಾಡ್‌ವೇ ರಸ್ತೆ, ಔಷಧಾಲಯ | ಬಿ.ಬಿ.ಎಂ.ಪಿ. |
| 32 | ಡಾ॥ ಜಯಲಕ್ಷ್ಮೀ ಕೆ., ಅಲಸೂರು ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 33 | ಡಾ॥ ಗೀತಾಂಜಲಿ ಡಿ., ಅಲಸೂರು ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 34 | ಡಾ॥ ಧನಲಕ್ಷ್ಮೀ, ಸೊನ್ನೇನಹಳ್ಳಿ ಆರೋಗ್ಯ ಕೇಂದ್ರ | ಬಿ.ಬಿ.ಎಂ.ಪಿ. |
| 35 | ಡಾ॥ ಮಣಿಮೇಘಲ, ಶಾಂತಿನಗರ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 36 | ಡಾ॥ ಲಲಿತಾ ಎಸ್.ಕೆ., ಹೆಚ್. ಸಿದ್ದಯ್ಯ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 37 | ಡಾ॥ ಅಮರೇಶ್ ಗದ್ದಿ, ಹೆಚ್. ಸಿದ್ದಯ್ಯ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 38 | ಡಾ॥ ಗಾಯಿತ್ರಿ, ಹೆಚ್. ಸಿದ್ದಯ್ಯ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 39 | ಡಾ॥ ಕಲ್ಪನಾ ಬಿ.ಎಸ್., ಹೆಚ್. ಸಿದ್ದಯ್ಯ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 40 | ಡಾ॥ ಸವಿತಾ ಎಸ್., ರಾಜಾಜಿನಗರ ಹೆರಿಗೆ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 41 | ಡಾ॥ ರಾಮಚಂದ್ರ ರೆಡ್ಡಿ | ಬಿ.ಬಿ.ಎಂ.ಪಿ. |
| 42 | ಡಾ॥ ಅನುಪಮ | ಬಿ.ಬಿ.ಎಂ.ಪಿ. |
| 43 | ಡಾ॥ ಮುರಳೀಧರ | ಬಿ.ಬಿ.ಎಂ.ಪಿ. |
| 44 | ಡಾ॥ ಹೇಮಲತಾ ಪಿ. | ಬಿ.ಬಿ.ಎಂ.ಪಿ. |
| 45 | ಡಾ॥ ಕುಮಾರ್ | ಬಿ.ಬಿ.ಎಂ.ಪಿ. |
| 46 | ಡಾ॥ ಕುಮಾರ್ ಹೆಚ್. ಆರ್. | ಬಿ.ಬಿ.ಎಂ.ಪಿ. |
| 47 | ಡಾ॥ ಜಗದೀಶ ಚಂದ್ರ | ಬಿ.ಬಿ.ಎಂ.ಪಿ. |
| 48 | ಡಾ॥ ಕುಮಾರಸ್ವಾಮಿ ಎಂ. ಎನ್.,<br>ಹೆಚ್. ಸಿದ್ದಯ್ಯ ರೆಫರಲ್ ಆಸ್ಪತ್ರೆ | ಬಿ.ಬಿ.ಎಂ.ಪಿ. |
| 49 | ಡಾ॥ ರಮೇಶ್ | ಬಿ.ಬಿ.ಎಂ.ಪಿ. |
| 50 | ಡಾ॥ ವೇಣುಗೋಪಾಲ್ | ಬಿ.ಬಿ.ಎಂ.ಪಿ. |
| 51 | ಡಾ॥ ಕುಮಾರ್ ಎಂ.ಬಿ. | ಬಿ.ಬಿ.ಎಂ.ಪಿ. |
| 52 | ಡಾ॥ ಪ್ರಕಾಶ್ ಬಾಬು ಎಂ.ಎಲ್., ಶಿವಾಜಿನಗರ ವಲಯ | ಬಿ.ಬಿ.ಎಂ.ಪಿ. |
| 53 | ಡಾ॥ ಶಿವಸ್ವಾಮಿ | ಬಿ.ಬಿ.ಎಂ.ಪಿ. |
| 54 | ಡಾ॥ ಬಸವರಾಜ ಹುಡೇದ್ | ಬಿ.ಬಿ.ಎಂ.ಪಿ. |
| 55 | ಡಾ॥ ನಂಜುಂಡರಾಜ ಅರಸು | ಬಿ.ಬಿ.ಎಂ.ಪಿ. |
| 56 | ಡಾ॥ ವೆಂಕಟರೆಡ್ಡಿ | ಬಿ.ಬಿ.ಎಂ.ಪಿ. |
| 57 | ಡಾ॥ ಉದಯ ಮನೋಹರ್ ದಾಸ್ | ಬಿ.ಬಿ.ಎಂ.ಪಿ. |

| | | |
|---|---|---|
| 58 | ಡಾ॥ ತೇರದಾಳ ಎಸ್.ಎಸ್. | ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ |
| 59 | ಡಾ॥ ಪ್ರಭು ಎನ್. ಬಿರಾದಾರ | ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ |
| 60 | ಡಾ॥ ಪ್ರಕಾಶ್ ಎಸ್. ಕಲಗೇರಿ | ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ |
| 61 | ಡಾ॥ ಶೋಭಾ ಮೂಲಿನಮನಿ | ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ |
| 62 | ಡಾ॥ ಮಹಮ್ಮದ್ ಇಕ್ಬಾಲ್ | ಮಂಗಳೂರು ಮಹಾನಗರ ಪಾಲಿಕೆ |
| 63 | ಡಾ॥ ಶಶಿಕಲಾ ಆರ್. | ಮೈಸೂರು ಮಹಾನಗರ ಪಾಲಿಕೆ |
| 64 | ಡಾ॥ ಪಾರ್ವತಿ ವಿ. | ಮೈಸೂರು ಮಹಾನಗರ ಪಾಲಿಕೆ |
| 65 | ಡಾ॥ ಮಮತ ಹೆಚ್.ಕೆ. | ಮೈಸೂರು ಮಹಾನಗರ ಪಾಲಿಕೆ |
| 66 | ಡಾ॥ ಯಮುನಾ | ಮೈಸೂರು ಮಹಾನಗರ ಪಾಲಿಕೆ |
| 67 | ಡಾ॥ ತೇಜೋಮಣಿ | ಮೈಸೂರು ಮಹಾನಗರ ಪಾಲಿಕೆ |
| 68 | ಡಾ॥ ಚಂಪ ಎ. | ಮೈಸೂರು ಮಹಾನಗರ ಪಾಲಿಕೆ |
| 69 | ಡಾ॥ ಸೈಯದ್ ಮುನವರ | ಮೆಡಿಕಲ್ ಇನ್ಸ್‌ಪೆಕ್ಷನ್ ರೂಮ್ ಪೊಲೀಸ್, ಮೈಸೂರು |
| 70 | ಡಾ॥ ಯಮನಕನಮರಡಿ ವಿ.ಎಂ. | ಮೆಡಿಕಲ್ ಇನ್ಸ್‌ಪೆಕ್ಷನ್ ರೂಮ್ ಕ್ಲಿನಿಕ್, ಬೆಳಗಾಂ |
| 71 | ಡಾ॥ ಅಶ್ವಿನಿ ಎಸ್. ಕುರ್ತಕೋಟಿ | ಮೆಡಿಕಲ್ ಇನ್ಸ್‌ಪೆಕ್ಷನ್ ರೂಮ್ ಕ್ಲಿನಿಕ್, ಬೆಳಗಾಂ |
| 72 | ಡಾ॥ ಕಿಶೋರ್ ಕುಮಾರ್ | ಮೆಡಿಕಲ್ ಇನ್ಸ್‌ಪೆಕ್ಷನ್ ರೂಮ್ ಕ್ಲಿನಿಕ್, ಮಂಗಳೂರು |
| 73 | ಡಾ॥ ನಾಗೇಶರಾವ್ | ಮೆಡಿಕಲ್ ಇನ್ಸ್‌ಪೆಕ್ಷನ್ ರೂಮ್ ಕ್ಲಿನಿಕ್, ಮೈಸೂರು |
| 74 | ಡಾ॥ ಪುಟ್ಟಸ್ವಾಮಿ | ಕರ್ನಾಟಕ ಪೋಲೀಸ್ ಅಕಾಡೆಮಿ, ಮೈಸೂರು |
| 75 | ಡಾ॥ ಪದ್ಮ ವಿ. ಶೆಟ್ಟಿ | ಆರೋಗ್ಯ ಕೇಂದ್ರ, ಮಂಗಳೂರು ವಿಶ್ವ ವಿದ್ಯಾಲಯ |
| 76 | ಡಾ॥ ಫೆಡರಿಕ್ ಡಿಸೋಜ | ಆರೋಗ್ಯ ಕೇಂದ್ರ, ಮಂಗಳೂರು ವಿಶ್ವ ವಿದ್ಯಾಲಯ |
| 77 | ಡಾ॥ ಮಧುಕುಮಾರ್ | ಇ.ಎಸ್.ಐ. ಆಸ್ಪತ್ರೆ, ಬೆಂಗಳೂರು |
| 78 | ಡಾ॥ ಕವಿತಾ ಪಟ್ಟಣ ಶೆಟ್ಟಿ | ಇ.ಎಸ್.ಐ. ಡಿಸ್ಪೆನ್ಸರಿ, ಗೋಕಾಕ್ |
| 79 | ಡಾ॥ ಮುಸ್ತಾಫಾ ಅಹಮದ್ | ಇ.ಎಸ್.ಐ. ಡಿಸ್ಪೆನ್ಸರಿ, ರಾಯಚೂರು |
| 80 | ಡಾ॥ ಜರೀನಾ ಬಾನು ತಹಸಿಲ್ದಾರ್ | ಇ.ಎಸ್.ಐ. ಡಿಸ್ಪೆನ್ಸರಿ, ಬೆಳಗಾಂ |
| 81 | ಡಾ॥ ಶ್ರೀಕಾಂತ ತೆಲಸಂಗಿ | ಇ.ಎಸ್.ಐ. ಡಿಸ್ಪೆನ್ಸರಿ, ಬಾಗಲಕೋಟೆ |
| 82 | ಡಾ॥ ರಹತ ಈ. ಜಾನ್ ಶೇಕ್ | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ |
| 83 | ಡಾ॥ ಹರೀಶ | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ |
| 84 | ಡಾ॥ ಮಹಮ್ಮದ್ ನಸ್ರುಲ್ಲಾ ಷರೀಫ್ | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ |
| 85 | ಡಾ॥ ಶ್ರೀದೇವಿ ಪ್ರಿಯದರ್ಶಿನಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 86 | ಡಾ॥ ಕೊಪ್ಪಳಕರ್ ಆರ್.ಎಸ್. | ವಿಮ್ಸ್, ಬಳ್ಳಾರಿ |
| 87 | ಡಾ॥ ವೆಂಕಟೇಶ್ ವಿ. | ವಿಮ್ಸ್, ಬಳ್ಳಾರಿ |
| 88 | ಡಾ॥ ಮಲ್ಲಿಕಾರ್ಜುನ್ ಜಿ. | ವಿಮ್ಸ್, ಬಳ್ಳಾರಿ |
| 89 | ಡಾ॥ ದೇವೇಂದ್ರಾಚಾರ್ | ವಿಮ್ಸ್, ಬಳ್ಳಾರಿ |
| 90 | ಡಾ॥ ಅಬ್ದುಲ್ ಗಫರ್ | ವಿಮ್ಸ್, ಬಳ್ಳಾರಿ |
| 91 | ಡಾ॥ ಶಿವಶಂಕರಪ್ಪ ಎಂ. | ವಿಮ್ಸ್, ಬಳ್ಳಾರಿ |
| 92 | ಡಾ॥ ಆರ್. ವಿ. ಹನುಮಯ್ಯ | ವಿಮ್ಸ್, ಬಳ್ಳಾರಿ |
| 93 | ಡಾ॥ ಅಶ್ವತ್ಥಮ್ಮ | ಜಿಲ್ಲಾ ಆಸ್ಪತ್ರೆ, ಬಳ್ಳಾರಿ |
| 94 | ಡಾ॥ ಆಂಜನೇಯ ಪ್ರಸಾದ್ | ವಿಮ್ಸ್, ಬಳ್ಳಾರಿ |
| 95 | ಡಾ॥ ಎಸ್.ಐ. ಹಿರೇಗೌಡರ್ | ಮಾನಸಿಕ ಆಸ್ಪತ್ರೆ, ಧಾರವಾಡ |
| 96 | ಡಾ॥ ಶೈಲಾ ಬಿ. ಹಿರೇಗೌಡರ್ | ಮಾನಸಿಕ ಆಸ್ಪತ್ರೆ, ಧಾರವಾಡ |
| 97 | ಡಾ॥ ಮಾರುತಿಹೆಬ್ಬಳ್ಳಿ | ಮಾನಸಿಕ ಆಸ್ಪತ್ರೆ, ಧಾರವಾಡ |

| | | |
|---|---|---|
| 98 | ಡಾ॥ ಚಂದ್ರಪ್ರಕಾಶ್ ಕೆ.ಸಿ. | ನಿಮ್ಹಾನ್ಸ್, ಬೆಂಗಳೂರು |
| 99 | ಡಾ॥ ನಾಗರಾಜ್ | ಮೈಸೂರು ವೈದ್ಯಕೀಯ ಕಾಲೇಜು |
| 100 | ಡಾ॥ ಆಲಿ ಹೈದರ್ ಸಾಕಿಯಾಲಿ | ಮೈಸೂರು ವೈದ್ಯಕೀಯ ವಿದ್ಯಾಲಯ |
| 101 | ಡಾ॥ ವಿ. ಅಭಿಜಿತ್ | ಬೆಂಗಳೂರು ಡೆಂಟಲ್ ಕಾಲೇಜು |
| 102 | ಡಾ॥ ಜಗದೀಶ್ | ಬೆಂಗಳೂರು ಡೆಂಟಲ್ ಕಾಲೇಜು |
| 103 | ಡಾ॥ ಸುಪದಮನಿ ದೇವಿ | ಬೆಂಗಳೂರು ಡೆಂಟಲ್ ಕಾಲೇಜು |
| 104 | ಡಾ॥ ಸುರೇಶ್ | ಬೆಂಗಳೂರು ಡೆಂಟಲ್ ಕಾಲೇಜು |
| 105 | ಡಾ॥ ಬಸವರಾಜ ಭಟ್ಟಾ | ಮೆಡಿಕಲ್ ಕಾಲೇಜು, ಬೀದರ್ |
| 106 | ಡಾ॥ ಪುರುಷೋತ್ತಮ ಸೋಮಯಾಜಿ | ಮೆಡಿಕಲ್ ಕಾಲೇಜು, ಹಾಸನ |
| 107 | ಡಾ॥ ಎಂ.ಎಂ. ನರಹಟ್ಟಿ | ಮೆಡಿಕಲ್ ಕಾಲೇಜು, ಬೆಳಗಾಂ |
| 108 | ಡಾ॥ ಹೆಚ್.ಸಿ. ಸಂಜಯ್ | ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ |
| 109 | ಡಾ॥ ಮಧುಸೂದನ ಸೋಮಯಾಜಿ ಬಿ. | ಜಿಲ್ಲಾ ಆಸ್ಪತ್ರೆ, ಹಾಸನ |
| 110 | ಡಾ॥ ವಿಶಾಲಾಕ್ಷಿ ಬಿ.ಎ. | ಜಿಲ್ಲಾ ಆಸ್ಪತ್ರೆ, ಹಾಸನ |
| 111 | ಡಾ॥ ಬಾಲಸುಬ್ರಹ್ಮಣ್ಯಂ | ಜಿಲ್ಲಾ ಆಸ್ಪತ್ರೆ, ಹಾಸನ |
| 112 | ಡಾ॥ ಉಮಾದೇವಿ ಹೆಚ್.ಆರ್. | ಜಿಲ್ಲಾ ಆಸ್ಪತ್ರೆ, ಹಾಸನ |
| 113 | ಡಾ॥ ಹರೀಶ್ ಎಂ.ಕೆ. | ಜಿಲ್ಲಾ ಆಸ್ಪತ್ರೆ, ಹಾಸನ |
| 114 | ಡಾ॥ ಹೆಚ್.ಎಸ್. ರವಿ | ಜಿಲ್ಲಾ ಆಸ್ಪತ್ರೆ, ಹಾಸನ |
| 115 | ಡಾ॥ ಮೀನಾಕ್ಷಿ | ಜಿಲ್ಲಾ ಆಸ್ಪತ್ರೆ, ಮಂಡ್ಯ |
| 116 | ಡಾ॥ ಗೀತಾ ಎಂ.ಎನ್. | ಜಿಲ್ಲಾ ಆಸ್ಪತ್ರೆ, ಮಂಡ್ಯ |
| 117 | ಡಾ॥ ಮಂಚೇಗೌಡ ಹೆಚ್.ಪಿ. | ಜಿಲ್ಲಾ ಆಸ್ಪತ್ರೆ, ಮಂಡ್ಯ |
| 118 | ಡಾ॥ ಶ್ರೀಧರಮೂರ್ತಿ ಕೆ. | ಜಿಲ್ಲಾ ಆಸ್ಪತ್ರೆ, ಮಂಡ್ಯ |
| 119 | ಡಾ॥ ರವೀಂದ್ರ ಬಿ. ಗೌಡ | ಜಿಲ್ಲಾ ಆಸ್ಪತ್ರೆ, ಮಂಡ್ಯ |
| 120 | ಡಾ॥ ಮೀನಾ ಸಿ.ಕೆ. | ಜಿಲ್ಲಾ ಆಸ್ಪತ್ರೆ, ಮಂಡ್ಯ |
| 121 | ಡಾ॥ ಇಂದ್ರಾಣಿ ಜಿ.ಎನ್. | ಜಿಲ್ಲಾ ಆಸ್ಪತ್ರೆ, ಮಂಡ್ಯ |
| 122 | ಡಾ॥ ಧೂಳಪ್ಪ ಹಾಯ್‌ಭಟ್ಟ | ಜಿಲ್ಲಾ ಆಸ್ಪತ್ರೆ, ಬೀದರ್ |
| 123 | ಡಾ॥ ರತಿಕಾಂತ ವಿ. ಸ್ವಾಮಿ | ಜಿಲ್ಲಾ ಆಸ್ಪತ್ರೆ, ಬೀದರ್ |
| 124 | ಡಾ॥ ಶಿವಶಂಕರ್ ಭೈರವಾಡಿ | ಜಿಲ್ಲಾ ಆಸ್ಪತ್ರೆ, ಬೀದರ್ |
| 125 | ಡಾ॥ ಭಸವಂತರಾವ್ ಗುಮೀದ್ | ಜಿಲ್ಲಾ ಆಸ್ಪತ್ರೆ, ಬೀದರ್ |
| 126 | ಡಾ॥ ವೈ. ರತ್ನಾಕರ, ವೈದ್ಯಾಧಿಕಾರಿ | ಎನ್.ಟಿ. ಮಲೇರಿಯಾ ಘಟಕ, ನಾರಾಯಣಪುರ |
| 127 | ಡಾ॥ ರಮೇಶ್ ಜಾದವ್, ವೈದ್ಯಾಧಿಕಾರಿ | ಎನ್.ಟಿ. ಮಲೇರಿಯಾ ಘಟಕ, ಕೆಂಭಾವಿ |
| 128 | ಡಾ॥ ಆರ್.ಎಸ್. ರಾಜಕುಮಾರ, ವೈದ್ಯಾಧಿಕಾರಿ | ಎನ್.ಟಿ. ಮಲೇರಿಯಾ ಘಟಕ, ಭೀಮರಾಯನ ಗುಡಿ |
| 129 | ಡಾ॥ ಎ.ಜಿ. ಬಿರಾದಾರ, ವೈದ್ಯಾಧಿಕಾರಿ | ಕೃಷ್ಣ ಭಾಗ್ಯ ಜಲ ನಿಗಮ, ಸಾರ್ವಜನಿಕ ಆಸ್ಪತ್ರೆ, ನಾರಾಯಣಪುರ |
| 130 | ಡಾ॥ ಸುನೀತ ಜಾಧವ್, ವೈದ್ಯಾಧಿಕಾರಿ | ಕೃಷ್ಣ ಭಾಗ್ಯ ಜಲ ನಿಗಮ ಆಸ್ಪತ್ರೆ, ಭೀಮರಾಯನಗುಡಿ |
| 131 | ಡಾ॥ ಬಿ.ಎಸ್. ವದಗೇರಾ | ಎನ್.ಟಿ. ಮಲೇರಿಯಾ ಘಟಕ, ಆಲಮಟ್ಟಿ |
| 132 | ಡಾ॥ ತನುಜಾ, ವೈದ್ಯಾಧಿಕಾರಿ | ಧಾರವಾಡ ವಿಶ್ವ ವಿದ್ಯಾಲಯ |
| 133 | ಡಾ॥ ಟಿ. ಪವಿತ್ರ, ವೈದ್ಯಾಧಿಕಾರಿ | ಬೆಂಗಳೂರು ವಿಶ್ವ ವಿದ್ಯಾಲಯ |
| 134 | ಡಾ॥ ಎಸ್. ನಿವೇದಿತಾ, ವೈದ್ಯಾಧಿಕಾರಿ | ಬೆಂಗಳೂರು ವಿಶ್ವ ವಿದ್ಯಾಲಯ |
| 135 | ಡಾ॥ ಹೆಚ್.ಸಿ. ಚೆಲುವನಾರಾಯಣ | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 136 | ಡಾ॥ ವರಲಕ್ಷ್ಮಿ ಕೆ.ಎ. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 137 | ಡಾ॥ ಕುಸುಮ ಬಿ.ಕೆ. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 138 | ಡಾ॥ ಬಿ.ಎನ್. ಸತ್ಯನಾರಾಯಣ | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 139 | ಡಾ॥ ವಿಜಯಶ್ರೀ ಎಂ.ಎಸ್. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 140 | ಡಾ॥ ಹೆಚ್.ವಿ. ಶಿವಕುಮಾರ್ | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |

| | | |
|---|---|---|
| 141 | ಡಾ॥ ರಮೇಶ್ ಆರ್. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 142 | ಡಾ॥ ತ್ಯಾಗರಾಜು ಬಿ.ಎನ್. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 143 | ಡಾ॥ ವಿಶ್ವನಾಥ ಬಿ. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 144 | ಡಾ॥ ರಮೇಶ್ ಬಿ. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 145 | ಡಾ॥ ರಾಜಾರೆಡ್ಡಿ | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 146 | ಡಾ॥ ವಿಶ್ವನಾಥ ಎ. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 147 | ಡಾ॥ ಸುಧಾ ಹೆಚ್.ಸಿ. | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 148 | ಡಾ॥ ಪುಟ್ಟರಾಜೇಗೌಡ | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 149 | ಡಾ॥ ಹರೀಶ್ ಕೆ. | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 150 | ಡಾ॥ ರಾಮಕೃಷ್ಣ ಹೆಚ್.ಡಿ. | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 151 | ಡಾ॥ ರಾಜಣ್ಣ ಎಸ್. | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 152 | ಡಾ॥ ಭಾನುಮೂರ್ತಿ | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 153 | ಡಾ॥ ಪ್ರಸನ್ನ ಕುಮಾರ್ ಎಂ.ವಿ. | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 154 | ಡಾ॥ ವಸಂತ ಕುಮಾರ | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 155 | ಡಾ॥ ಸುರೇಶ್ | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು |
| 156 | ಡಾ॥ ಗಾಯತ್ರಿದೇವಿ ಸಿ. | ವಾಣಿ ವಿಲಾಸ ಆಸ್ಪತ್ರೆ, ಬೆಂಗಳೂರು |
| 157 | ಡಾ॥ ಉಮಾ ಬುಗ್ಗಿ | ವಾಣಿ ವಿಲಾಸ ಆಸ್ಪತ್ರೆ, ಬೆಂಗಳೂರು |
| 158 | ಡಾ॥ ಪ್ರಮೀಳದೇವಿ ಎನ್. | ವಾಣಿ ವಿಲಾಸ ಆಸ್ಪತ್ರೆ, ಬೆಂಗಳೂರು |
| 159 | ಡಾ॥ ಸರಸ್ವತಿ ಜಿ.ಎಸ್. | ವಾಣಿ ವಿಲಾಸ ಆಸ್ಪತ್ರೆ, ಬೆಂಗಳೂರು |
| 160 | ಡಾ॥ ಶಕುಂತಲಾ ಎನ್.ಬಿ. | ವಾಣಿ ವಿಲಾಸ ಆಸ್ಪತ್ರೆ, ಬೆಂಗಳೂರು |
| 161 | ಡಾ॥ ಅನೀಸ್ ತಾಜುನ್ನೀಸ | ವಾಣಿ ವಿಲಾಸ ಆಸ್ಪತ್ರೆ, ಬೆಂಗಳೂರು |
| 162 | ಡಾ॥ ಮಹೇಶ್ ಕುಮಾರ ಆರ್. | ವಾಣಿ ವಿಲಾಸ ಆಸ್ಪತ್ರೆ, ಬೆಂಗಳೂರು |
| 163 | ಡಾ॥ ಸುಜಾತ ಪಿ. | ವಾಣಿ ವಿಲಾಸ ಆಸ್ಪತ್ರೆ, ಬೆಂಗಳೂರು |
| 164 | ಡಾ॥ ರೇವಡಿ ಎಸ್.ಎಸ್. | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 165 | ಡಾ॥ ಸತ್ಯಪ್ರಕಾಶ್ | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 166 | ಡಾ॥ ಚಂದ್ರಶೇಖರ | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 167 | ಡಾ॥ ಮೀನಾಕ್ಷಿ ಎ.ಸಿ. | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 168 | ಡಾ॥ ಜಗದೀಶ್ ಬಿ.ಎಂ. | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 169 | ಡಾ॥ ವೇಣುಗೋಪಾಲ ವಿ. | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 170 | ಡಾ॥ ವೆಂಕಟೇಶ್ ಜಯದತ್ತ | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 171 | ಡಾ॥ ಕರಿಯಣ್ಣ ಟಿ.ಜಿ. | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 172 | ಡಾ॥ ಶ್ರೀಧರ | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 173 | ಡಾ॥ ಸುಮಿತ್ರ ಜೆ. | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 174 | ಡಾ॥ ಉಮಾ ರಾಕೇಶ್ | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 175 | ಡಾ॥ ಸಾವಿತ್ರಮ್ಮ ಎ.ಜಿ. | ಎಸ್.ಡಿ.ಎಸ್. ಟಿ.ಬಿ. ಆಸ್ಪತ್ರೆ, ಬೆಂಗಳೂರು |
| 176 | ಡಾ॥ ಪ್ರೇಮಕುಮಾರಿ ಎಂ.ಎಲ್. | ಚೆಲುವಾಂಬ ಆಸ್ಪತ್ರೆ, ಮೈಸೂರು |
| 177 | ಡಾ॥ ಗಂಗಮ್ಮ ಎಸ್., ಆರ್.ಎಂ.ಓ. | ಚೆಲುವಾಂಬ ಆಸ್ಪತ್ರೆ, ಮೈಸೂರು |
| 178 | ಡಾ॥ ಕುಮುದ ಎನ್. | ಚೆಲುವಾಂಬ ಆಸ್ಪತ್ರೆ, ಮೈಸೂರು |

| | | |
|---|---|---|
| 179 | ಡಾ॥ ಶೈಲಜ | ಚೆಲುವಾಂಬ ಆಸ್ಪತ್ರೆ, ಮೈಸೂರು |
| 180 | ಡಾ॥ ವಿಜಯಕುಮಾರ್, ಆರ್.ಎಂ.ಓ. | ಕೆ.ಆರ್. ಆಸ್ಪತ್ರೆ, ಮೈಸೂರು |
| 181 | ಡಾ॥ ಚಂದ್ರಶೇಖರ | ಕೆ.ಆರ್. ಆಸ್ಪತ್ರೆ, ಮೈಸೂರು |
| 182 | ಡಾ॥ ಮಹೇಂದ್ರ ಎಂ.ಕೆ. | ಕೆ.ಆರ್. ಆಸ್ಪತ್ರೆ, ಮೈಸೂರು |
| 183 | ಡಾ॥ ಲತಾ ಎಸ್. | ಕೆ.ಆರ್. ಆಸ್ಪತ್ರೆ, ಮೈಸೂರು |
| 184 | ಡಾ॥ ಪುಷ್ಪಲತ ಎಂ.ಎನ್. | ಕೆ.ಆರ್. ಆಸ್ಪತ್ರೆ, ಮೈಸೂರು |
| 185 | ಡಾ॥ ಕಾಶೀನಾಥ ಪುಲೇಕರ್ | ಕೆ.ಆರ್. ಆಸ್ಪತ್ರೆ, ಮೈಸೂರು |
| 186 | ಡಾ॥ ಸಿ ರಾಜಣ್ಣ | ಕೆ.ಆರ್. ಆಸ್ಪತ್ರೆ, ಮೈಸೂರು |
| 187 | ಡಾ॥ ಕೃಷ್ಣಯ್ಯ ಸಿ. | ಕೆ.ಆರ್. ಆಸ್ಪತ್ರೆ, ಮೈಸೂರು |
| 188 | ಡಾ॥ ಚಂದ್ರಾವತಿ ಕೆ. | ಕೆ.ಆರ್. ಆಸ್ಪತ್ರೆ, ಮೈಸೂರು |
| 189 | ಡಾ॥ ಅಶೋಕ್ ಎಸ್. ಈ. | ಕೆ.ಆರ್. ಆಸ್ಪತ್ರೆ, ಮೈಸೂರು |
| 190 | ಡಾ॥ ಗಡ್ಡಪ್ಪ ಎಂ. ಹೊಸಮನೆ | ಕೆ.ಆರ್. ಆಸ್ಪತ್ರೆ, ಮೈಸೂರು |
| 191 | ಡಾ॥ ಎಂ.ಎಸ್. ಶೀಲಾ | ಕೆ.ಆರ್. ಆಸ್ಪತ್ರೆ, ಮೈಸೂರು |
| 192 | ಡಾ॥ ಹೆಚ್. ಪದ್ಮಾವತಿ | ಕೆ.ಆರ್. ಆಸ್ಪತ್ರೆ, ಮೈಸೂರು |
| 193 | ಡಾ॥ ಸುವರ್ಣಕುಮಾರಿ | ಕೆ.ಆರ್. ಆಸ್ಪತ್ರೆ, ಮೈಸೂರು |
| 194 | ಡಾ॥ ಶಶಿ ಬಿ.ಎಂ. | ಪಿ.ಕೆ.ಟಿ.ಬಿ. ಆಸ್ಪತ್ರೆ, ಮೈಸೂರು |
| 195 | ಡಾ॥ ಶಶಿಕಲಾ ಎಂ. | ಪಿ.ಕೆ.ಟಿ.ಬಿ. ಆಸ್ಪತ್ರೆ, ಮೈಸೂರು |
| 196 | ಡಾ॥ ಚಂಪಕಮಾಲಿನಿ ಎಂ.ಎಸ್. | ಪಿ.ಕೆ.ಟಿ.ಬಿ. ಆಸ್ಪತ್ರೆ, ಮೈಸೂರು |
| 197 | ಡಾ॥ ಚಂದ್ರಕಲಾ ಪಿ. | ಪಿ.ಕೆ.ಟಿ.ಬಿ. ಆಸ್ಪತ್ರೆ, ಮೈಸೂರು |
| 198 | ಡಾ॥ ಕೃಷ್ಣಕುಮಾರ್ ಬಿ. | ಪಿ.ಕೆ.ಟಿ.ಬಿ. ಆಸ್ಪತ್ರೆ, ಮೈಸೂರು |
| 199 | ಡಾ॥ ಸಾಯಿನಾಥ ಆರ್.ಪಿ. | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 200 | ಡಾ॥ ಮೋಹನ್ | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 201 | ಡಾ॥ ಲಕ್ಷ್ಮೀನಾರಾಯಣ ವಿ. | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 202 | ಡಾ॥ ಶಿವಕುಮಾರ್ ವೈ.ಎಂ. | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 203 | ಡಾ॥ ಶಿವಕುಮಾರ್ ಬಿ.ಕೆ. | ಮೈಸೂರು ಮೆಡಿಕಲ್ ಕಾಲೇಜು, ಮೈಸೂರು |
| 204 | ಡಾ॥ ಕೋನಾಸಾಗರ್ ಪಿ.ಬಿ. | ಶ್ರೀ ಜೆ.ಸಿ. ಆಸ್ಪತ್ರೆ, ಹಾಸನ |
| 205 | ಡಾ॥ ನಟರಾಜು ಪಿ.ಎಲ್. | ಶ್ರೀ ಜೆ.ಸಿ. ಆಸ್ಪತ್ರೆ, ಹಾಸನ |
| 206 | ಡಾ॥ ಶಿವನಂಜುಂಡಯ್ಯ | ಬೆಂಗಳೂರು ಮೆಡಿಕಲ್ ಕಾಲೇಜು |
| 207 | ಡಾ॥ ರವೀಂದ್ರ ಎಸ್. ಪುಕಾಲೇ | ಬೆಂಗಳೂರು ಮೆಡಿಕಲ್ ಕಾಲೇಜು |
| 208 | ಡಾ॥ ಜಯಮ್ಮ | ಬೆಂಗಳೂರು ಮೆಡಿಕಲ್ ಕಾಲೇಜು |
| 209 | ಡಾ॥ ತ್ರಿಶೂಲ ಕೋಡನಪುರ | ಮಿಂಟೋ ಆಸ್ಪತ್ರೆ, ಬೆಂಗಳೂರು |
| 210 | ಡಾ॥ ರತ್ನ ಬಿ.ಸಿ. | ಮಿಂಟೋ ಆಸ್ಪತ್ರೆ, ಬೆಂಗಳೂರು |
| 211 | ಡಾ॥ ರಂಗನಾಯ್ಕ | ಮಿಂಟೋ ಆಸ್ಪತ್ರೆ, ಬೆಂಗಳೂರು |
| 212 | ಡಾ॥ ಸವಿತ | ಮಿಂಟೋ ಆಸ್ಪತ್ರೆ, ಬೆಂಗಳೂರು |
| 213 | ಡಾ॥ ಚಂದ್ರಪ್ರಭ ಆರ್.ಎಲ್. | ಮಿಂಟೋ ಆಸ್ಪತ್ರೆ, ಬೆಂಗಳೂರು |
| 214 | ಡಾ॥ ಕೃಷ್ಣಪ್ರಸಾದ್ ಎ.ಹೆಚ್. | ಮಿಂಟೋ ಆಸ್ಪತ್ರೆ, ಬೆಂಗಳೂರು |
| 215 | ಡಾ॥ ರಾಜಣ್ಣ ಪಿ. | ಮಿಂಟೋ ಆಸ್ಪತ್ರೆ, ಬೆಂಗಳೂರು |
| 216 | ಡಾ॥ ಶೋಭಾ ಟಿ. | ಮಿಂಟೋ ಆಸ್ಪತ್ರೆ, ಬೆಂಗಳೂರು |

**ಬಿ.ಎಫ್. ಹುಬ್ಬಳ್ಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.ನಂ. 1733

**ಸಹಕಾರ ಸಚಿವಾಲಯ**

**ವಿಷಯ :** ಶ್ರೀ ಸಿದ್ದೇಶ್ವರ ಎಜುಕೇಷನ್ ಸೊಸೈಟಿ, ಮೊರಬ ತಾಲ್ಲೂಕು, ರಾಯಭಾಗ, ಬೆಳಗಾಂ ಜಿಲ್ಲೆ ಈ ಸಂಸ್ಥೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** (1) ಸಂಘಗಳ ನೋಂದಣಾಧಿಕಾರಿಗಳು ಹಾಗೂ ಸಹಕಾರ ಸಂಘಗಳ ಉಪ ನಿಬಂಧಕರು, ಬೆಳಗಾವಿ ಜಿಲ್ಲೆ ಇವರ ಪತ್ರ ಸಂಖ್ಯೆ : ಡಿಆರ್‌ಎಲ್/ಸಂನೋ/ಶ್ರೀ.ಸಿ.ಎ.ಸೊ.ಮೊ/2011-12, ದಿನಾಂಕ 25-4-2011.

(2) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ : ಸಇ 50 ಸಸಂನೋ 2011, ದಿನಾಂಕ 19.05.2011.

(3) ಅಧ್ಯಕ್ಷರು, ಶ್ರೀ ಸಿದ್ದೇಶ್ವರ ಎಜುಕೇಷನ್ ಸೊಸೈಟಿ, ಮೊರಬ ತಾಲ್ಲೂಕು, ರಾಯಭಾಗ, ಬೆಳಗಾಂ ಜಿಲ್ಲೆ ಇವರ ಲಿಖಿತ ಹೇಳಿಕೆಯ ಪತ್ರ ದಿನಾಂಕ 28-7-2011.

(4) ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/11/ಎಸ್‌ಓಆರ್/2/2011-12, ದಿನಾಂಕ 1-8-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ದಿನಾಂಕ 25-4-2011 ರ ಪತ್ರದಲ್ಲಿ, ಸಂಘಗಳ ನೋಂದಣಾಧಿಕಾರಿಗಳು ಹಾಗೂ ಸಹಕಾರ ಸಂಘಗಳ ಉಪ ನಿಬಂಧಕರು, ಬೆಳಗಾವಿ ಜಿಲ್ಲೆ ರವರು ಶ್ರೀ ಸಿದ್ದೇಶ್ವರ ಎಜುಕೇಷನ್ ಸೊಸೈಟಿ, ಮೊರಬ ತಾಲ್ಲೂಕು, ರಾಯಭಾಗ, ಬೆಳಗಾಂ ಜಿಲ್ಲೆ ಈ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರಡಿ ಸಂಖ್ಯೆ : 30/81-82 ರಂತೆ ದಿನಾಂಕ 27-8-1981 ರಂದು ನೋಂದಣಿಯಾಗಿದ್ದು, ಸದರಿ ಸಂಸ್ಥೆಯ ಕಾರ್ಯದರ್ಶಿರವರು ಕಲಂ 13 ರಡಿ ಸಂಸ್ಥೆಯ ವಾರ್ಷಿಕ ಲೆಕ್ಕಪತ್ರಗಳನ್ನು ಸಲ್ಲಿಸಿರುತ್ತಾರೆ ಮತ್ತು ಸದರಿ ಲೆಕ್ಕಪತ್ರಗಳನ್ನು ಒಪ್ಪಿ ದಿನಾಂಕ 19-5-2010 ರಂದು ಆದೇಶ ಹೊರಡಿಸಲಾಗಿರುತ್ತದೆ. ಸಂಸ್ಥೆಯಲ್ಲಿನ ಎರಡನೇ ಎದುರುದಾರರು ಸಲ್ಲಿಸಿದ್ದ ರಿಟ್ ಅಪೀಲು ಸಂಖ್ಯೆ : 6333/2010 ಗೆ ದಿನಾಂಕ 27-5-2010 ರಂದು ನೀಡಿದ ಆದೇಶದ ಮೇರೆಗೆ ವಿಚಾರಣಾಧಿಕಾರಿಗಳು ದಿನಾಂಕ 14-6-2010 ರಂದು ವಿಚಾರಣಾ ವರದಿಯನ್ನು ಪರಿಶೀಲಿಸಿ, ಒಂದನೆ ಎದುರುದಾರರು ಸಲ್ಲಿಸಿದ್ದ ವರದಿಯನ್ನು ತಳ್ಳಿ ಹಾಕಿ ಎರಡನೇ ಎದುರುದಾರರು ಸಲ್ಲಿಸಿದ ವರದಿಯನ್ನು ಒಪ್ಪಿ ದಿನಾಂಕ 18-10-2010 ರಂದು ಆದೇಶ ಹೊರಡಿಸಲಾಗಿರುತ್ತದೆ. ಈ ಆದೇಶವನ್ನು ಪ್ರಶ್ನಿಸಿ ಒಂದನೆ ಎದುರುದಾರರು ರಿಟ್ ಅರ್ಜಿ 64957/2010 ನ್ನು ದಾಖಲಿಸಿದ್ದು, ಸದರಿ ರಿಟ್ ಅರ್ಜಿಯನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಸಂಚಾರಿ ಪೀಠ, ಧಾರವಾಡ ರವರು ಪುರಸ್ಕರಿಸಿರುತ್ತಾರೆ. ಮೇಲಿನ ಎರಡು ರಿಟ್ ಅಪೀಲುಗಳನ್ನು ಒಂದುಗೂಡಿಸಿ ದಿನಾಂಕ 14-3-2011 ರಂದು ಇತ್ಯರ್ಥಪಡಿಸಿ, ಶ್ರೀ ಸಿದ್ದೇಶ್ವರ ಎಜುಕೇಷನ್ ಸೊಸೈಟಿ, ಮೊರಬ, ತಾಲ್ಲೂಕು ರಾಯಭಾಗ, ಬೆಳಗಾಂ ಜಿಲ್ಲೆ ಇದರ ಆಡಳಿತವನ್ನು ನಡೆಸಿಕೊಂಡು ಹೋಗಲು ಆಡಳಿತಾಧಿಕಾರಿಯನ್ನು ನೇಮಕ ಮಾಡಲು 6ನೇ ಎದುರುದಾರರಾದ ಸಂಘಗಳ ನೋಂದಣಾಧಿಕಾರಿಗಳು, ಬೆಳಗಾವಿ ಇವರಿಗೆ ನಿರ್ದೇಶನ ಇರುವ ಪ್ರಯುಕ್ತ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ(1)(ಸಿ) ರನ್ವಯ ಆಡಳಿತಾಧಿಕಾರಿಗಳ ನೇಮಕ ಮಾಡುವಂತೆ ಸರ್ಕಾರವನ್ನು ವಿನಂತಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಪತ್ರವನ್ನು ಪರಿಶೀಲಿಸಿದ ಸರ್ಕಾರವು ಸದರಿ ಸಂಘಕ್ಕೆ ಸರ್ಕಾರದಿಂದ ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ದಿನಾಂಕ 19-5-2011ರ ಕಾರಣ ಕೇಳುವ ನೋಟೀಸನ್ನು ಸದರಿ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಜಾರಿ ಮಾಡುತ್ತಾ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ತಮ್ಮ ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ಈ ಸೂಚನಾ ಪತ್ರ ತಲುಪಿದ 15 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವುದು, ತಪ್ಪಿದಲ್ಲಿ ನೀವು ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿರುತ್ತದೆ.

ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ : (3)ರ ದಿನಾಂಕ 28-7-2011ರ ಪತ್ರದಲ್ಲಿ ಸಂಸ್ಥೆಯ ಅಧ್ಯಕ್ಷರು ತಮ್ಮ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಹೇಳಿಕೆಯಲ್ಲಿ, ಶ್ರೀ ಸಿದ್ದೇಶ್ವರ ಎಜುಕೇಷನ್ ಸೊಸೈಟಿ, ಮೊರಬ, ತಾಲ್ಲೂಕು ರಾಯಭಾಗ, ಬೆಳಗಾಂ ಜಿಲ್ಲೆ ಈ ಸಂಸ್ಥೆಗೆ ಆಡಳಿತ ಮಂಡಳಿ ಇಲ್ಲದೇ ಶೂನ್ಯ ಸ್ಥಿತಿ ನಿರ್ಮಾಣವಾಗಿದ್ದು, ಹೀಗೆಯೇ ಮುಂದುವರೆದಲ್ಲಿ ತುಂಬಲಾರದ ಹಾನಿ ಉಂಟಾಗುತ್ತದೆಯಾದ್ದರಿಂದ, ಹೈಕೋರ್ಟ್ ನಿರ್ದೇಶನದಂತೆ ಸಂಘದ ಆಡಳಿತ ಮಂಡಳಿಯನ್ನು ಮುಕ್ತ ಚುನಾವಣೆ ಮೂಲಕ ರಚಿಸಲು ಕ್ರಮ ಕೈಗೊಳ್ಳಬೇಕೆಂದು ಹಾಗೂ ಆಡಳಿತಾಧಿಕಾರಿಯನ್ನು ನೇಮಕ ಮಾಡಬೇಕೆಂದು ಕೋರಿರುತ್ತಾರೆ.

ಸಂಸ್ಥೆಯ ಅಧ್ಯಕ್ಷರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರಿಗೆ ಕಳುಹಿಸಿ, ಲಿಖಿತ ಹೇಳಿಕೆಯನ್ನು ನಿಯಮಾನುಸಾರ ಪರಿಶೀಲಿಸಿ ಸ್ಪಷ್ಟ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವಂತೆ ದಿನಾಂಕ: 29/07/2011ರ ಪತ್ರದಲ್ಲಿ ತಿಳಿಸಲಾಗಿತ್ತು. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 01/08/2011ರ ಪತ್ರದಲ್ಲಿ, ಶ್ರೀ ಸಿದ್ದೇಶ್ವರ ಎಜುಕೇಷನ್ ಸೊಸೈಟಿ, ಮೊರಬ ತಾಲ್ಲೂಕು ರಾಯಭಾಗ, ಬೆಳಗಾಂ ಜಿಲ್ಲೆ ಈ ಸಂಸ್ಥೆಯ ಆಡಳಿತವನ್ನು ನಡೆಸಿಕೊಂಡು ಹೋಗಲು ಆಡಳಿತಾಧಿಕಾರಿಯವರನ್ನು ನೇಮಕ ಮಾಡಲು ಕೋರಿ ರಿಟ್ ಅಪೀಲು ಸಂಖ್ಯೆ: 6333/2010 ಮತ್ತು ರಿಟ್ ಅಪೀಲು ಸಂಖ್ಯೆ: 6345/2010ನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಸಂಚಾರಿ ಪೀಠ, ಧಾರವಾಡ ಇಲ್ಲಿ ಸಲಿಸಿದ್ದು, ಅವರು ಹೊರಡಿಸಲಾದ ದಿನಾಂಕ: 14/03/2011ರ ಆದೇಶವನ್ನು ಉಲ್ಲೇಖಿಸಿ ಸಂಘಕ್ಕೆ ಆಡಳಿತಾಧಿಕಾರಿಯವರನ್ನು ನೇಮಕ ಮಾಡಲು 6ನೇ ಎದುರುದಾರರಾದ ಸಂಘಗಳ ನೋಂದಾಣಾಧಿಕಾರಿಗಳು, ಬೆಳಗಾವಿ ಇವರಿಗೆ ನಿರ್ದೇಶನ ಇರುವ ಪ್ರಯುಕ್ತ ಸಹಕಾರ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)(ಸಿ) ರನ್ವಯ ಆಡಳಿತಾಧಿಕಾರಿಗಳನ್ನು ನೇಮಕ ಮಾಡಲು ಸಂಸ್ಥೆಯವರು ವಿನಂತಿಸಿದ್ದು, ಮಾನ್ಯ ನ್ಯಾಯಾಲಯದ ಆದೇಶ ಪಾಲನೆ ಆಗದಿದ್ದಲ್ಲಿ, ನ್ಯಾಯಾಲಯದ ನಿಂದನೆ ಆಗುವ ಸಂಭವ ಇರುವುದರಿಂದ, ಮೇಲಿನ ಸಂಸ್ಥೆಗೆ ಆಡಳಿತಾಧಿಕಾರಿಗಳನ್ನು ನೇಮಕ ಮಾಡಲು ಹಾಗೂ ನಿಯಮಾನುಸಾರ ಸಂಸ್ಥೆಯ ಆಡಳಿತ ಮಂಡಳಿಯ ಚುನಾವಣೆ ನಡೆಸುವ ಬಗ್ಗೆ ಸರ್ಕಾರಕ್ಕೆ ಸಹಕಾರ ಸಂಘಗಳ ನಿಬಂಧಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸಂಸ್ಥೆಯ ಅಧ್ಯಕ್ಷರು ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆ ಹಾಗೂ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು, ಶ್ರೀ ಸಿದ್ದೇಶ್ವರ ಎಜುಕೇಷನ್ ಸೊಸೈಟಿ, ಮೊರಬ ತಾಲ್ಲೂಕು ರಾಯಭಾಗ, ಬೆಳಗಾಂ ಜಿಲ್ಲ ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 50 ಸಸಂನೋ 2011, ಬೆಂಗಳೂರು, ದಿನಾಂಕ: 04ನೇ ಆಗಸ್ಟ್ 2011.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಸಿದ್ದೇಶ್ವರ ಎಜುಕೇಷನ್ ಸೊಸೈಟಿ, ಮೊರಬ ತಾಲ್ಲೂಕು ರಾಯಭಾಗ, ಬೆಳಗಾಂ ಜಿಲ್ಲೆ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕೋಡಿ, ಬೆಳಗಾವಿ ಜಿಲ್ಲೆ ಇವರನ್ನು ಸಂಸ್ಥೆಯ ಆಡಳಿತಾಧಿಕಾರಿಯನ್ನಾಗಿ 06 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಚುನಾವಣೆ ಪ್ರಕ್ರಿಯೆ ಪೂರ್ಣಗೊಳಿಸಿ, ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಹಾಗೂ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಸರೋಜಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ-2 (ಪ್ರ),
ಸಹಕಾರ ಇಲಾಖೆ.

ಪಿ.ಆರ್.ನಂ. 2160

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಎಸ್‌ಜಿಎಸ್‌ವೈಯಡಿ 29 ಜಿಲ್ಲಾ ಪಂಚಾಯತಿಗಳಿಗೆ 2011-12ನೇ ಸಾಲಿನ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
(1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ:ಜಿ 20011/01/2011 ಎಸ್‌ಜಿಎಸ್‌ವೈ-I ದಿನಾಂಕ: 11-04-2011.
(2) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/1/2011 ಎಸ್‌ಜಿಎಸ್‌ವೈ- I (9) ದಿನಾಂಕ: 15-04-2011.
(3) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/1/2011 ಎಸ್‌ಜಿಎಸ್‌ವೈ- I (38) ದಿನಾಂಕ: 15-04-2011.
(4) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/1/2011 ಎಸ್‌ಜಿಎಸ್‌ವೈ- I (67) ದಿನಾಂಕ: 15-04-2011.
(5) ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜಿವೈ 2010, ಬೆಂಗಳೂರು, ದಿನಾಂಕ : 03-05-2011.

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75:25 ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (2) ರಿಂದ (4) ರ ಪತ್ರಗಳಲ್ಲಿ ಎಸ್‌ಜಿಎಸ್‌ವೈ ಯಡಿ 2011-12 ನೇ ಸಾಲಿಗೆ ರಾಜ್ಯದ ಮೈಸೂರು ಜಿಲ್ಲಾ ಪಂಚಾಯತ್ ಹೊರತುಪಡಿಸಿ ಉಳಿದ 29 ಜಿಲ್ಲೆಗಳಿಗೆ ಒಂದನೇ ಕಂತಿನ ಅನುದಾನ ಒಟ್ಟು ₹ 41,33,54,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಒಂದನೇ ಕಂತಿನ ಅನುದಾನ ₹ 13,77,84,000 ಗಳನ್ನು ಬಿಡುಗಡೆ ಮಾಡಬೇಕಿತ್ತು.

ಆದರೆ, 2010-11ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಒಟ್ಟು ₹ 59,78,03,000 ಗಳನ್ನು ಬಿಡುಗಡೆ ಮಾಡಿದ್ದು, ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ₹ 19,92,68,000 ಗಳನ್ನು ಬಿಡುಗಡೆ ಮಾಡಬೇಕಿತ್ತು. 17 ಜಿಲ್ಲಾ ಪಂಚಾಯತಿಗಳಿಗೆ 2010-11ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಕಾಯ್ದಿರಿಸಿದ ಅನುದಾನದ ಲಭ್ಯತೆಗನುಸಾರವಾಗಿ ₹ 13,37,75,000 ಗಳನ್ನು ಮಾತ್ರ ಬಿಡುಗಡೆಗೊಳಿಸಲಾಗಿತ್ತು. ಉಳಿಕೆ ₹ 6,54,93,000 ಗಳನ್ನು 2011-12 ನೇ ಸಾಲಿನಲ್ಲಿ ಓದಲಾಗಿದೆ (5) ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ. ಬೆಂಗಳೂರು ಗ್ರಾಮಾಂತರ, ಬೀದರ್, ಚಾಮರಾಜನಗರ, ಚಿಕ್ಕಬಳ್ಳಾಪುರ, ದಾವಣಗೆರೆ, ಹಾಸನ, ಕೊಡಗು, ಕೋಲಾರ, ಮಂಡ್ಯ, ರಾಮನಗರ, ತುಮಕೂರು ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಅನುದಾನದ ಲಭ್ಯತೆಗೆ ಸೀಮಿತಗೊಳಿಸಿ ಹಾಗೂ ಉಳಿದ ಜಿಲ್ಲಾ ಪಂಚಾಯತಿಗಳಿಗೆ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ₹ 11,25,32,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜಿವೈ 2011, ಬೆಂಗಳೂರು, ದಿನಾಂಕ 21-06-2011**

ರಾಜ್ಯ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2011-12 ನೇ ಸಾಲಿನ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ₹ 11,25,32,000 (ಹನ್ನೊಂದು ಕೋಟಿ ಇಪ್ಪತ್ತೈದು ಲಕ್ಷದ ಮೂವತ್ತೆರಡು ಸಾವಿರ ₹ ಮಾತ್ರ) ಗಳನ್ನು ಅನುಬಂಧದಲ್ಲಿ ತೋರಿಸಿರುವ 29 ಜಿಲ್ಲಾ ಪಂಚಾಯತಿಗಳಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ-6 ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2011-2012 ನೇ ಲಿಂಕ್ ರೋಡ್ 2501-01-198-6-01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501-01-101-0-13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14-07-2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ-6) ಯ ಸಂಖ್ಯೆ ಆಇ 172 ವೆಚ್ಚ-6/2011 ದಿನಾಂಕ 30-3-2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ:ಗ್ರಾಅಪ 14 ಎಸ್‌ಜೆವೈ 2007 ದಿನಾಂಕ 18-04-2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2011-12 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online ಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 4 ಪಿಬಿಎಸ್ 2011-12 ದಿನಾಂಕ 04-06-2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ.ಸರ್ಕಾರದ ಜಂಟಿ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ : 21-06-2011 ಕ್ಕೆ ಅನುಬಂಧ**

(₹ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ು ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2011-12 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಒಟ್ಟು ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾಗಿರುವ ಅನುದಾನ | 2011-12ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗಳಿಗೆ ನಿಗದಿಪಡಿಸಿದ ಅನುದಾನ | 2010-11ನೇ ಸಾಲಿನ ಬಾಕಿ ಅನುದಾನವನ್ನು 2011-12ನೇ ಸಾಲಿನ ಆಯವ್ಯಯದಲ್ಲಿ ಭರಿಸಿ ಬಿಡುಗಡೆ ಮಾಡಿದ ಅನುದಾನ | ಜಿಲ್ಲೆಗಳಲ್ಲಿ ಬಿಡುಗಡೆಗೆ ಲಭ್ಯವಿರುವ ಅನುದಾನ (ಕಾಲಂ 7-8) | ಅನುದಾನದ ಲಭ್ಯತೆಗೆ ಅನುಗುಣವಾಗಿ ಜಿ.ಪಂ.ಗಳಿಗೆ ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಬಾಗಲಕೋಟೆ | 461 | 2900ZZ0001 | 1, 02,23,000 | 34,08,000 | 63,00,000 | 0 | 63,00,000 | 34,08,000 |
| 2 | ಬೆಂಗಳೂರು ನಗರ | 401 | 0100ZZ8001 | 43,53,000 | 14,51,000 | 32,00,000 | 11,97,000 | 20,03,000 | 14,51,000 |

| | | | | | | | | | |
|---|---|---|---|---|---|---|---|---|---|
| 3 | ಬೆಂಗಳೂರು (ಗ್ರಾ) | 402 | 0300ZZ8001 | 56,41,000 | 18,80,000 | 17,00,000 | 0 | 17,00,000 | 17,00,000 |
| 4 | ಬೆಳಗಾಂ | 413 | 2200ZZ0002 | 3,02,18,000 | 1,00,73,000 | 1,80,00,000 | 0 | 1,80,00,000 | 1,00,73,000 |
| 5 | ಬಳ್ಳಾರಿ | 418 | 3400ZZ0001 | 2,40,10,000 | 80,03,000 | 1,48,00,000 | 0 | 1,48,00,000 | 80,03,000 |
| 6 | ಬೀದರ್ | 419 | 3800ZZ5701 | 1,70,17,000 | 56,72,000 | 94,09,000 | 56,28,000 | 37,81,000 | 37,81,000 |
| 7 | ಬಿಜಾಪುರ | 414 | 2800ZZ9152 | 2,00,31,000 | 66,77,000 | 1,23,00,000 | 42,85,000 | 80,15,000 | 66,77,000 |
| 8 | ಚಾಮರಾಜನಗರ | 456 | 1000ZZ0001 | 2,12,02,000 | 70,67,000 | 90,00,000 | 58,31,000 | 31,69,000 | 31,69,000 |
| 9 | ಚಿಕ್ಕಮಗಳೂರು | 408 | 1800ZZ0017 | 96,28,000 | 32,09,000 | 61,00,000 | 9,80,000 | 51,20,000 | 32,09,000 |
| 10 | ಚಿಕ್ಕಬಳ್ಳಾಪುರ | 453 | 0600ZZ0001 | 1,11,37,000 | 37,12,000 | 35,00,000 | 15,40,000 | 19,60,000 | 19,60,000 |
| 11 | ಚಿತ್ರದುರ್ಗ | 403 | 1600ZZ0001 | 1,71,02,000 | 57,01,000 | 1,05,00,000 | 0 | 1,05,00,000 | 57,01,000 |
| 12 | ದಾವಣಗೆರೆ | 451 | 1700ZZ0002 | 1,38,05,000 | 46,02,000 | 75,00,000 | 50,50,000 | 24,50,000 | 24,50,000 |
| 13 | ದಕ್ಷಿಣ ಕನ್ನಡ | 409 | 1900ZZ0047 | 92,96,000 | 30,99,000 | 57,00,000 | 0 | 57,00,000 | 30,99,000 |
| 14 | ಧಾರವಾಡ | 415 | 2500ZZ8798 | 86,12,000 | 28,71,000 | 53,13,000 | 0 | 53,13,000 | 28,71,000 |
| 15 | ಗದಗ್ | 462 | 2600ZZ0001 | 1,36,68,000 | 45,56,000 | 84,32,000 | 37,59,000 | 46,73,000 | 45,56,000 |
| 16 | ಗುಲ್ಬರ್ಗಾ | 417 | 3200ZZ0003 | 1,71,76,000 | 57,25,000 | 1,02,00,000 | 33,26,000 | 68,74,000 | 57,25,000 |
| 17 | ಹಾಸನ | 410 | 1300ZZ0003 | 1,24,77,000 | 41,59,000 | 70,00,000 | 64,61,000 | 5,39,000 | 5,39,000 |
| 18 | ಹಾವೇರಿ | 463 | 2700ZZ0001 | 1,49,26,000 | 49,75,000 | 92,00,000 | 0 | 92,00,000 | 49,75,000 |
| 19 | ಕೊಡಗು | 411 | 1200ZZ0001 | 35,08,000 | 11,69,000 | 21,00,000 | 9,64,000 | 11,36,000 | 11,36,000 |
| 20 | ಕೋಲಾರ | 404 | 0700ZZ8002 | 1,25,82,000 | 41,94,000 | 40,00,000 | 34,61,000 | 5,39,000 | 5,39,000 |
| 21 | ಕೊಪ್ಪಳ | 466 | 1500ZZ0010 | 2,14,75,000 | 71,58,000 | 1,42,00,000 | 0 | 1,42,00,000 | 71,58,000 |
| 22 | ಮಂಡ್ಯ | 412 | 1100ZZ0001 | 1,62,42,000 | 54,14,000 | 1,00,00,000 | 51,06,000 | 48,94,000 | 48,94,000 |
| 23 | ರಾಯಚೂರು | 420 | 3600ZZ0001 | 2,02,22,000 | 67,41,000 | 1,00,00,000 | 0 | 1,00,00,000 | 67,41,000 |
| 24 | ರಾಮನಗರ | 452 | 0400ZZ0001 | 1,01,00,000 | 33,67,000 | 17,00,000 | 0 | 17,00,000 | 17,00,000 |
| 25 | ಶಿವಮೊಗ್ಗ | 405 | 1400ZZ0002 | 1,72,02,000 | 57,34,000 | 1,06,00,000 | 17,58,000 | 88,42,000 | 57,34,000 |
| 26 | ತುಮಕೂರು | 406 | 0800ZZ0001 | 2,54,98,000 | 84,99,000 | 1,50,00,000 | 1,17,80,000 | 32,20,000 | 32,20,000 |
| 27 | ಉಡುಪಿ | 457 | 2000ZZ0001 | 75,68,000 | 25,23,000 | 40,00,000 | 20,82,000 | 19,18,000 | 19,18,000 |
| 28 | ಉತ್ತರ ಕನ್ನಡ | 416 | 3000ZZ0080 | 1,07,18,000 | 35,73,000 | 66,00,000 | 0 | 66,00,000 | 35,73,000 |
| 29 | ಯಾದಗಿರಿ | 421 | 3300ZZ0001 | 77,17,000 | 25,72,000 | 50,00,000 | 22,85,000 | 27,15,000 | 25,72,000 |
| | | | | 41,33,54,000 | 13,77,84,000 | 23,13,54,000 | 6,54,93,000 | 16,58,61,000 | 11,25,32,000 |

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1734

## HOME SECRETARIAT

## CIRCULAR

**No. HD 173 PPE 2010, Bangalore, Dated 20-05-2011**

**Sub :** Authorisation to the Prosecutors of Karnataka State on behalf of the Department of Culture & Archaeological Survey of India, where they are Parties to the Criminal Proceedings before the Sessions Courts and its subordinate courts in the State of Karnataka.

**Read:**
1. Letter of Superintending Archaelogist, Archaeological Survey of India, Bangalore Circle vide No. F.No. 2/1/02010-MP (PA)-3606, dated 26.05.2010 and 25.06.2010.
2. Letter of Superintending Archaelogist, Archaeological Survey of India, Dharwad Circle vide No. 39/Misc/2010-M/3994, dated 26.05.2010.
3. Letter of Director, Department of Prosecution and Government Litigations, Bangalore vide No. DPN/ADM/26/10-11, dated 30.06.2010.

All the Prosecutors of the Department of Prosecutions and Government Litigation, State of Karnataka are hereby permitted and authorized to appear on behalf of the Department of Culture & Archaeological Survey of India, (Government of India) where they are complaints, appellants and respondents to the criminal proceedings before the subordinate Criminal Courts i.e., Sessions Court, Chief Judicial Magistrate's Court, Chief Metropolitan Magistrate's Courts and the J.M.F.C Courts provided the interest of the State of Karnataka is not adversely affected.

**K.C.Siddappa**
Under Secretary to Government
Home Department,
(Law & Order, COFEPOSA and Prosecutions)

P.R. 1736

## ಒಳಾಡಳಿತ ಸಚಿವಾಲಯ

**ವಿಷಯ :** ಹಿರಿಯ ಸರ್ಕಾರಿ ನೌಕರರುಗಳಿಗೆ ಕಿರಿಯ ಸರ್ಕಾರಿ ನೌಕರರ ವೇತನದ ಎತ್ತರಕ್ಕೆ ಸಮಾನಗೊಳಿಸಿ ನೀಡಿರುವ ಎತ್ತರಕ್ಕೆ ಸೌಲಭ್ಯವನ್ನು ಹಿಂಪಡೆಯುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 52 ಪಿಪಿಇ 2010, ಬೆಂಗಳೂರು, ದಿನಾಂಕ: 08ನೇ ಜುಲೈ 2011**

ದಿನಾಂಕ: 19.09.1994ರ ಸರ್ಕಾರಿ ಆದೇಶ ಸಂ: ಎಫ್‌ಡಿ-7 ಎಸ್‌ಆರ್‌ಪಿ 93ರಲ್ಲಿ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳು, 1991ಕ್ಕೆ ಸೇರ್ಪಡೆಯಾದ ನಿಯಮ 7(ಎ)ರ ಅನ್ವಯ ದಿನಾಂಕ: 01.06.1991ರ ನಂತರದ ಪ್ರಕರಣಗಳಿಗೆ ಕಿರಿಯ ಸರ್ಕಾರಿ ನೌಕರರ ವೇತನಕ್ಕೆ ಸಮಾನಗೊಳಿಸುವ ಎತ್ತರಿಕೆಯ ಸೌಲಭ್ಯದ ಲಭ್ಯತೆ ಇರುವುದಿಲ್ಲ. ಈ ಹಿನ್ನಲೆಯಲ್ಲಿ, ಈ ಕೆಳಕಂಡ ಆದೇಶಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆದಿದೆ.

1) ಸರ್ಕಾರಿ ಆದೇಶ ಸಂ: ಒಇ 405 ಪಿಪಿಇ 2008, ದಿನಾಂಕ: 11.03.2009,
2) ಸರ್ಕಾರಿ ಆದೇಶ ಸಂ: ಒಇ 401 ಪಿಪಿಇ 2008, ದಿನಾಂಕ: 11.03.2009,
3) ಸರ್ಕಾರಿ ಆದೇಶ ಸಂ: ಒಇ 397 ಪಿಪಿಇ 2008, ದಿನಾಂಕ: 18.03.2009,
4) ಸರ್ಕಾರಿ ಆದೇಶ ಸಂ: ಒಇ 400 ಪಿಪಿಇ 2008, ದಿನಾಂಕ: 11.03.2009,
5) ಸರ್ಕಾರಿ ಆದೇಶ ಸಂ: ಒಇ 407 ಪಿಪಿಇ 2008, ದಿನಾಂಕ: 21.02.2009,
6) ಸರ್ಕಾರಿ ಆದೇಶ ಸಂ: ಒಇ 399 ಪಿಪಿಇ 2008, ದಿನಾಂಕ: 11.03.2009,

ಮುಂದುವರೆದು, ಮೇಲಿನ ಆದೇಶಗಳನ್ವಯ ಕಿರಿಯ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿ ಇವರ ವೇತನದ ಎತ್ತರಕ್ಕೆ ಹಿರಿಯ ಸರ್ಕಾರಿ ಅಧಿಕಾರಿಗಳ ವೇತನವನ್ನು ಸಮಾನಗೊಳಿಸಿ ಜಾರಿಗೊಳಿಸಿದ್ದರಿಂದ, ಜಾರಿಗೊಂಡ ದಿನಾಂಕದಿಂದ ಪಡೆದಿರುವ ಹೆಚ್ಚುವರಿ ಮೊತ್ತವನ್ನು ಸರ್ಕಾರಕ್ಕೆ ಹಿಂದಿರುಗಿಸುವಂತೆ ಈ ಕೆಳಕಂಡ ಅಧಿಕಾರಿಗಳಿಗೆ ಆದೇಶಿಸಿದೆ.

| | |
|---|---|
| 1 | ಶ್ರೀ ಎ.ಎ. ಪಾರಶೆಟ್ಟಿ,<br>ಅಭಿಯೋಗ ಉಪ ನಿರ್ದೇಶಕರು, ಮೈಸೂರು |
| 2 | ಶ್ರೀ ಎಸ್.ಆರ್. ದೇಸಾಯಿ<br>ಸರ್ಕಾರಿ ಅಭಿಯೋಜಕರು,<br>ವಿಶೇಷ ನ್ಯಾಯಾಲಯ (ಎಸ್‌ಸಿ/ಎಸ್‌ಟಿ), ಬಿಜಾಪುರ |
| 3 | ಶ್ರೀ ಟಿ.ಎಸ್. ಗೋಪಿನಾಥ್<br>ಸರ್ಕಾರಿ ಅಭಿಯೋಜಕರು (ಸ್ವ.ಪ್ರ.),<br>ಬಾಂಬ್ ಬ್ಲಾಸ್ಟ್ ನ್ಯಾಯಾಲಯ, ಬೆಂಗಳೂರು |
| 4 | ಶ್ರೀ ಎ.ಎಂ. ಬಣಕಾರ್,<br>2ನೇ ಸರ್ಕಾರಿ ಅಭಿಯೋಜಕರು (ಸ್ವ.ಪ್ರ), ಧಾರವಾಡ |

| | |
|---|---|
| 5 | ಶ್ರೀ ಜೆ.ಎನ್. ದೇಸಾಯಿ,<br>ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು |
| 6 | ಶ್ರೀ ಎಲ್.ಎಸ್.ಸುಳ್ಳದ್,<br>ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕ ಕಛೇರಿ, ಹುಬ್ಬಳ್ಳಿ ಮತ್ತು ಧಾರವಾಡ |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 112 ಸೇ–2/2011, ದಿನಾಂಕ: 13.06.2011 ರಲ್ಲಿ ನೀಡಿರುವ ನಿರ್ದೇಶನದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

ಪಿ.ಆರ್. 1737

## ಇಂಧನ ಸಚಿವಾಲಯ

**ವಿಷಯ :** ಮೆ॥ ಸರೋಜ್ ಎನರ್ಜಿ ಕಂಪನಿ–ಪ್ರೈವೇಟ್ ಲಿಮಿಟೆಡ್ ಇವರ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 212 ಎನ್‌ಸಿಇ 2005 ದಿನಾಂಕ: 22.8.2005.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 132 ಎನ್‌ಸಿಇ 2006 ದಿನಾಂಕ: 16.3.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 394 ಎನ್‌ಸಿಇ 2009 ದಿನಾಂಕ: 16.2.2010.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 394 ಎನ್‌ಸಿಇ 2009 ದಿನಾಂಕ: 14.1.2011.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್–208/ಇಗ್ಗಲೂರು–ಎಂಹೆಚ್‌ಎಸ್/2011/1802 ದಿನಾಂಕ: 20/22.6.2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಸರೋಜ್ ಎನರ್ಜಿ ಕಂಪನಿ–ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನ ಇಗ್ಗಲೂರು ಗ್ರಾಮದ ಬಳಿ ಶಿಂಷಾ ನದಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್‌ನಿಂದ 1.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(3)ರ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ: 30.6.2010 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ: 01.7.2010 ರಿಂದ 30.6.2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಪ್ರಗತಿ ಸಾಧಿಸಿರುವುದರಿಂದ ಹಾಗೂ ಅವರ ಕೋರಿಕೆಯ ಮೇರೆಗೆ ಕಾಲಾವಕಾಶವನ್ನು ದಿನಾಂಕ: 01.07.2011 ರಿಂದ 31.03.2012ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 283 ಎನ್‌ಸಿಇ 2011, ಬೆಂಗಳೂರು, ದಿನಾಂಕ: 7–7–2011**

ಮೆ॥ ಸರೋಜ್ ಎನರ್ಜಿ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಮನಗರ ಜಿಲ್ಲೆಯ (ಹಿಂದಿನ ಬೆಂಗಳೂರು ಗ್ರಾಮಾಂತರ ಜಿಲ್ಲೆ) ಚನ್ನಪಟ್ಟಣ ತಾಲ್ಲೂಕಿನ ಇಗ್ಗಲೂರು ಗ್ರಾಮದ ಬಳಿ ಶಿಂಷಾ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 01.07.2011 ರಿಂದ 30.06.2012ರವರೆಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 1738